ಬೆಲೆ: ಎರಡು ಆಣೆ

# ಕರ್ಮವೀರ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವದು.

KARMAVEER
WEEKLY
HUBLI
NOV. 11
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ. ]

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

[ Editor : H. R. Purohit, M. A.

ಸಂಪುಟ ೧೮ ]　ಹುಬ್ಬಳ್ಳಿ ಸೋಮವಾರ ತಾರೀಖು ೧೧ — ೧೧ — ೧೯೪೬　[ ಸಂಚಿಕೆ ೩೯

# ಭೂಮಧ್ಯ ಸಮುದ್ರದ ಸ್ವಾಮಿತ್ವದ ಬಗ್ಗೆ ಬ್ರಿಟನ್ನಿನ ಹಂಬಲ— ಅಮೇರಿಕೆಯೂ ತಳವೂರಬಯಸುತ್ತದೆ— ಪ್ರಬಲ ರಾಷ್ಟ್ರಗಳಲ್ಲಿ ತಿಕ್ಕಾಟಕ್ಕೆ ಇದೇ ಕಾರಣವಾಗಬಹುದು — ಆಂಗ್ಲ-ಅಮೇರಿಕನ್ ಒಳಸಂಚಿನ ಬಗ್ಗೆ ರಶಿಯದ ಎಚ್ಚರಿಕೆ

ಭೂಮಧ್ಯ ಸಮುದ್ರದ ಪ್ರಭುತ್ವದ ಬಗ್ಗೆ ಮತ್ತೆ ತಿಕ್ಕಾಟವೆದ್ದಿದೆ. ಆ ಸಮುದ್ರವು ಮೂರೂ ಖಂಡಗಳಲ್ಲಿ ಹಾಯುವುದರಿಂದ ಮತ್ತು ಜಗತ್ತಿನಲ್ಲಿ ದೊಡ್ಡ ಜಲ ಮಾರ್ಗವಾಗಿದ್ದುದರಿಂದ ಯಾವುದೊಂದೇ ರಾಷ್ಟ್ರದ ಸೊತ್ತು ಅದು ಆಗಲಾರದು. ಬ್ರಿಟನ್ ಅದರ ಮೇಲೆ ಪ್ರಭುತ್ವ ನಡೆಸಿದ್ದಾದರೆ ಗಂಡಾಂತರ ತಪ್ಪಿದ್ದಲ್ಲ ಎಂಬುದಾಗಿ ರಶಿಯಾ ಅಭಿಪ್ರಾಯ ಪಡುತ್ತದೆ. ಆದರೆ ಬ್ರಿಟನ್, ಫೆಸಿಸ್ಟ ಸ್ಪೇನದ ಸಹಾಯದಿಂದ ಮತ್ತು ಗ್ರೀಸ ಪ್ರಭುತ್ವದ ಬೆಂಬಲದಿಂದ ಭೂಮಧ್ಯ ಸಮುದ್ರದಲ್ಲಿ ತನ್ನ ಸ್ಥಾನಮಾನಗಳನ್ನು ಭದ್ರಪಡಿಸಿಕೊಳ್ಳಹತ್ತಿದೆ. ಅಲ್ಲದೆ ಡಾರ್ಡನೆಲ್ಸದಲ್ಲಿ ರಶಿಯಾಕ್ಕೆ ಅವಕಾಶ ಕೊಡಬಾರದೆಂದು ಟರ್ಕಿಯನ್ನು ಎಬ್ಬಿಸಿ ಕೂಡ್ರಿಸಿದೆ. ಈ ರೀತಿಯಾಗಿ ಭೂಮಧ್ಯ ಸಮುದ್ರ ಗಂಡಾಂತರ ಪ್ರದೇಶವಾಗಿದೆ. ಬ್ರಿಟನ್ ತನ್ನ ಆಗ್ರಹವನ್ನು ಬಿಡದಿದ್ದರೆ ಕಾಡ್ಗಿಚ್ಚು ಯಾವಾಗ ಹಬ್ಬುವುದೋ ಹೇಳಲಿಕ್ಕೆ ಬಾರದಂತಾಗಿದೆ. ರಿಯರ ಆಡ್ಮಿರಲ್ ಎ. ಬೆಲಿಯವರು ಮಾಸ್ಕೋದ ನ್ಯೂ ಟಾಯಿಮ್ಸದಲ್ಲಿ ಬರೆದ ಮಹತ್ವದ ಬರೆಹದ ಆಶಯವಿಂತಿದೆ.

## ಬ್ರಿಟನ್ನಿನ ಚಾಣಕ್ಯನೀತಿ

ಭೂಮಧ್ಯ ಸಮುದ್ರ ಯುರೋಪದ ಮತ್ತು ಅದರ ವಸಾಹತುಗಳ ಉತ್ತರ ಆಫ್ರಿಕೆಯ ಪ್ರದೇಶಗಳ ಮಧ್ಯದಲ್ಲಿದ್ದು ಅಟ್ಲಾಂಟಿಕ ಮತ್ತು ಹಿಂದೀ ಮಹಾಸಾಗರಗಳನ್ನು ಜೋಡಿಸುವ ಸಾಧನವಾಗಿದೆ. ಈ ರೀತಿ ಅತ್ಯಂತ ಮಹತ್ವದ ಜಲ ಮಾರ್ಗದ ಪ್ರಭುತ್ವದ ಬಗ್ಗೆ ಎಂದಿನಿಂದಲೂ ರಾಷ್ಟ್ರ ರಾಷ್ಟ್ರಗಳಲ್ಲಿ ತಿಕ್ಕಾಟ ನಡೆದೇ ಇದೆ. ಜಿಬ್ರಾಲ್ಟರ, ಮಾಲ್ಟಾ ಮತ್ತು ಸುಯೇಜ ಕಾಲುವೆಗಳ ಈ ಮೂರು ಮಹತ್ವದ ಸ್ಥಳಗಳಿಗಾಗಿಯೆ ಭೂಮಧ್ಯ ಸಮುದ್ರ ಇಷ್ಟೊಂದು ಆಯಕಟ್ಟಿನ ಸ್ಥಳವಾಗಿದೆ. ಬ್ರಿಟನ್ ಯುದ್ಧಪೂರ್ವದಲ್ಲಿಯಂತೆ ಈಗಲೆ ಇವುಗಳ ಮೇಲೆ ಪ್ರಭುತ್ವ ನಡೆಸುತ್ತಿದೆ. ಭೂಮಧ್ಯ ಸಮುದ್ರದ ಪಶ್ಚಿಮ ದ್ವಾರದಲ್ಲಿ ಜಿಬ್ರಾಲ್ಟರ ಬ್ರಿಟನ್‌ದ ಭದ್ರ ಕೋಟೆಯಾಗಿದೆ. ಮಾಲ್ಟಾ ಭೂಮಧ್ಯಸಮುದ್ರದ ಮಧ್ಯಭಾಗವನ್ನು ರಕ್ಷಿಸುತ್ತದೆ. ಸುಯೇಜ ಕಾಲುವೆಯ ಮೇಲಿನ ಬ್ರಿಟಿಶ್ ಪ್ರಭುತ್ವದಿಂದ ಆ ಮಹಾಸಮುದ್ರದ ಪೂರ್ವ ದ್ವಾರವು ಭದ್ರವಾಗಿದೆ. ಈ ರೀತಿ [illegible] ಭೂಮಧ್ಯ ಸಮುದ್ರದ ಮೇಲಿನ ಪ್ರಭುತ್ವಕ್ಕೆ ಬ್ರಿಟನ್ ಈ ಮೂರೂ ಮಹತ್ವದ ಸ್ಥಳಗಳನ್ನು ಭದ್ರವಾಗಿರಿಸಿಕೊಂಡಿದೆ.

ಜಿಬ್ರಾಲ್ಟರದ ಮೇಲೆ ಬ್ರಿಟನ್‌ದ ಪ್ರಭುತ್ವವು ಅದರೆದುರಿಗಿರುವ ಆಫ್ರಿಕದ ಕರಾವಳಿ ಯಾರ ವಶದಲ್ಲಿರುವದೆಂಬುದನ್ನು ಮತ್ತು ಯಾವ ಸೈನಿಕ ದಳ ಅಲ್ಲಿರಿಸಲಾಗಿದೆಂಬದನ್ನವಲಂಬಿಸುತಿದೆ. ಐಬೇರಿಯನ್ ದ್ವೀಪಕಲ್ಪದಲ್ಲಿ ಯಾರ ಪ್ರಭುತ್ವವಿದೆಯೋ ಅದರ ರಾಜಕೀಯ ಧೋರಣವನ್ನು ಅದು ಅವಲಂಬಿಸುತ್ತದೆ ಅಂತೆಯೇ ಬ್ರಿಟನ್ ಫೆಸಿಸ್ಟ ಸಾಲಜ್ಹಾರ ಮತ್ತು ಫ್ರಾಂಕೋನ ಗೂಡ ಚಾಣಕ್ಯತಂತ್ರವನ್ನು ನಡೆಸಿ ಭೂಮಧ್ಯ ಸಮುದ್ರದಲ್ಲಿ ತನ್ನ ಸ್ಥಾನಮಾನಗಳನ್ನು ಭದ್ರವಾಗಿರಿಸಿಕೊಂಡಿದೆ. ಅಲ್ಲದೆ 'ಬೃಹತ್ ಲಿಬಿಯಾ' ಎಂಬ ಸ್ವತಂತ್ರ ಹೊಸ ಪ್ರಭುತ್ವವನ್ನು ಪ್ರಸ್ಥಾಪಿಸಬೇಕೆಂದು ಬ್ರಿಟನ್ ಪ್ಯಾರೀಸಿನಲ್ಲಿ ಕೂಡಿದ ಪರರಾಷ್ಟ್ರ ಮಂತ್ರಿಗಳ ಸಮ್ಮೇಳನದಲ್ಲಿ ಪ್ರತಿಪಾದಿಸಿತು. ಇದರಿಂದ ಇಟಲಿಯ ವಸಾಹತುಗಳಲ್ಲೆಲ್ಲ ತಮ್ಮದೆ ಕಾರಸ್ಥಾನ ನಡೆಸಲು ಅವಕಾಶ ಸಿಕ್ಕುವುದೆಂಬ ಹಬ್ಬಯಕೆ ಅವರಿಗೆ. ಇಟಲಿಯ ವಸಾಹತುಗಳಲ್ಲಿಯೆ ಭೂಮಧ್ಯ ಸಮುದ್ರದಲ್ಲಿಯ ನೌಕಾ ಮತ್ತು ವೈಮಾನಿಕ ಠಾಣೆಗಳಿದ್ದುದರಿಂದ ಅವು ತಮ್ಮ ನಿಯಂತ್ರಣದಲ್ಲುಳಿದರೆ ಮಧ್ಯ ಭೂಮಧ್ಯ ಸಮುದ್ರದ ಮೇಲೆ ತಮ್ಮ ಪ್ರಭುತ್ವ ಭದ್ರವಾಗುವದೆಂದು ಅವರ ಹೊಂಚು. ಅಮೇರಿಕೆ ಈ ಯೋಜನೆಗಳಿಗೆ ಬೆಂಬಲ ಕೊಟ್ಟಿತು. ಆದರೆ ರಶಿಯ ಅದಕ್ಕೆ ತೀವ್ರ ವಿರೋಧ ಪ್ರದರ್ಶಿಸಿದ್ದರಿಂದ ಈ ಕುಟಿಲ ಕಾರಸ್ಥಾನ ಕಾರ್ಯರೂಪಕ್ಕಿಳಿಯಲಿಕ್ಕಿಲ್ಲ.

## ಟ್ರೀಸ್ಟ-ದ್ವಿತೀಯ ಜಿಬ್ರಾಲ್ಟರ

ಕೊರ್ಫ್ಯು ಮತ್ತು ಉಳಿದ ಆಯೋನಿಯನ್ ದ್ವೀಪಗಳಲ್ಲಿಯ ನೌಕಾ ಠಾಣೆಗಳನ್ನುಪಯೋಗಿಸುವದರಿಂದ ಬ್ರಿಟನ್ ಆಡ್ರಿಯಾಟಿಕ್‌ದ ಮೇಲೆ ಹೆಚ್ಚು ಪ್ರಭುತ್ವವನ್ನು ಪ್ರಸ್ಥಾಪಿಸಬಲ್ಲುದು. ಆದರೆ ಇಷ್ಟರಿಂದಲೆ ಅದಕ್ಕೆ ಸಮಾಧಾನವಿದ್ದಂತೆ ತೋರುವದಿಲ್ಲ. ಟ್ರಿಸ್ಟದ ಸಂಬಂಧದಲ್ಲಿ ಬ್ರಿಟನ ತಳೆದ ಧೋರಣದಿಂದ ಇದು ಸ್ಪಷ್ಟವಾಗುತ್ತದೆ. ಟ್ರೀಸ್ಟದ ಸಂಬಂಧದಲ್ಲಿ ಬ್ರಿಟನ್ ಯುಗೊಸ್ಲಾವ ಜನರ ಹಕ್ಕುಬಾಧ್ಯತೆಗಳನ್ನು ಅಲ್ಲಗಳೆದದ್ದಲ್ಲದೆ ಮಧ್ಯ ಯುರೋಪ ರಾಷ್ಟ್ರಗಳ ಹಿತಸಂಬಂಧಗಳನ್ನೂ ಲಕ್ಷಿಸಲಿಲ್ಲ. ಟ್ರಿಸ್ಟ ಮಧ್ಯ ಯುರೋಪ ರಾಷ್ಟ್ರಗಳಿಗೆ ಸ್ವಾಭಾವಿಕವಾದ ಜಲ ಮಾರ್ಗವಾಗಿದೆ. ಬ್ರಿಟನ್‌ದ ಸದ್ಯದ ಧೋರಣವನ್ನು ನೋಡಿದರೆ ಟ್ರೀಸ್ಟವನ್ನು ಎರಡನೆ ಜಿಬ್ರಾಲ್ಟರವನ್ನಾಗಿ ಮಾರ್ಪಡಿಸದೇಕೆಂದು ಅಥರ ಮಹತ್ವಾಕಾಂಕ್ಷೆಯಿದ್ದಂತೆ ತೋರುವದು.

ಇಜಿಪ್ತ, ಪೂರ್ವ ಭೂಮಧ್ಯ ರಾಷ್ಟ್ರಗಳು ಮತ್ತು ಸಮೀಪದ ಇರಾಕ ಮತ್ತು ಟ್ರಾನ್ಸ ಜೋರ್ಡನ್ ರಾಷ್ಟ್ರಗಳ ಮೇಲೆ ಬ್ರಿಟನದ ರಾಜಕೀಯ ಪ್ರಭುತ್ವವಿದ್ದುದರಿಂದ ಸುಯೇಜ ಕಾಲುವೆಯಲ್ಲಿ ಇಷ್ಟೊಂದು ಪ್ರಸ್ಥ ಬೆಳೆಸಲು ಅದಕ್ಕೆ ಅವಕಾಶ ಸಿಕ್ಕಿದೆ. ಅಲ್ಲದೆ ಕೆಂಪು ಸಮುದ್ರ ಮತ್ತು ಅರಬೀ ಸಮುದ್ರದಲ್ಲಿ ಬ್ರಿಟನ್ ಆಯಕಟ್ಟಿನ ಮತ್ತು ಮಹತ್ವದ ರಾಜಕೀಯ ಸ್ಥಾನವನ್ನು ಪಡೆದಿದೆ. ಈ ಎಲ್ಲ ನೌಕಾ ಮತ್ತು ವೈಮಾನಿಕ ಠಾಣೆಗಳನ್ನು ಭದ್ರವಾಗಿರಿಸಿಕೊಳ್ಳುವುದಕ್ಕಾಗಿ ಬ್ರಿಟನ್ ಪ್ರಚಂಡ ಪ್ರಯತ್ನ ನಡೆಸಿದೆಯಲ್ಲದೆ ಸಮೀಪದ ಪೂರ್ವ ರಾಷ್ಟ್ರಗಳಲ್ಲಿ ತನ್ನ ಕಾಲು ಚಾಚಲು ವಿಶ್ವಪ್ರಯತ್ನ ನಡೆಸಿದೆ. ಈ ಪೂರ್ವ ರಾಷ್ಟ್ರಗಳಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯದ ಚಳವಳಿಯನ್ನು ಬಗ್ಗುಬಡೆಯಲು ಬ್ರಿಟನ್ ಯುಕ್ತಿಪ್ರಯುಕ್ತಿಗಳನ್ನು ನಡೆಸಿದುದಕ್ಕೂ ಇದೇ ಕಾರಣ.

ಇಜಿಪ್ತದ ಸ್ವಾತಂತ್ರ್ಯ ಬಗ್ಗೆ ೧೯೩೩ ರಲ್ಲಿ ಬಹಳ ಒತ್ತಾಯಪಡಿಸಲ್ಪಟ್ಟದ್ದರಿಂದ ಬ್ರಿಟನ್ ಅದರ ಮೇಲಿನ ತನ್ನ ಪ್ರಭುತ್ವವನ್ನು ಬಿಡಬೇಕಾಯಿತು. ಇಜಿಪ್ತ ಔಪಚಾರಿಕವಾಗಿ ಸ್ವತಂತ್ರ ರಾಷ್ಟ್ರವಾಯಿತು. ಇಜಿಪ್ತದ ಸಂರಕ್ಷಣೆ, ಸುಯೇಜದ ಮುಖಾಂತರ ಅದರ ಮಾರ್ಗಗಳ ರಕ್ಷಣೆ ಮತ್ತು ಪರರಾಷ್ಟ್ರೀಯರ ಹಾಗೂ ಇಜಿಪ್ತದಲ್ಲಿಯ ಅಲ್ಪಸಂಖ್ಯಾಕರ ರಕ್ಷಣೆಯ ಭಾರವನ್ನು ಬ್ರಿಟನ್ ತನ್ನ ಕಡೆಗೆ ವಹಿಸಿಕೊಂಡು ಇಜಿಪ್ತ ರಾಜಕಾರಣದಲ್ಲಿ ತನ್ನ ಕೈವಾಡ ನಡೆಸುತ್ತಲೆ ಬಂದಿದೆ. ಇದರಿಂದ ಪೂರ್ವ ಭೂಮಧ್ಯ ಸಮುದ್ರ ಪ್ರದೇಶದಲ್ಲಿ ತನ್ನ ಪ್ರಭುತ್ವವನ್ನು ಚೆನ್ನಾಗಿ ಪ್ರಸ್ಥಾಪಿತ ಮಾಡಿಕೊಂಡಿದೆ. ಆಂಗ್ಲ—ಇಜಿಪ್ತ ಸುಡಾನದ ಮೇಲೆಯೂ ತನ್ನ ಪ್ರಭುತ್ವವನ್ನು ಇಟ್ಟುಕೊಂಡಿದೆ.

ಪಾಲಿಸ್ತಾನವನ್ನೂ ಬ್ರಿಟಿಶ್‌ರು ತಮಗನುಕೂಲವಾದ ಭದ್ರಪ್ರದೇಶ ಮಾಡಿಕೊಂಡಿದ್ದಾರೆ. ಪಾಲಿಸ್ತಾನ ಮತ್ತು ಸಾಯಪ್ರಸ್ ದ್ವೀಪದ ಮೇಲಿನ ಪ್ರಭುತ್ವದಿಂದ ಬ್ರಿಟನ್ ಪೂರ್ವ ಭೂಮಧ್ಯ ಸಮುದ್ರ ಪ್ರದೇಶದ ಒಡೆತನವನ್ನು ಸಾಧಿಸಿದೆ. ಪಾಲಿಸ್ತಾನದಲ್ಲಿ ಬ್ರಿಟಿಶ್‌ರ ಸುಸಜ್ಜಿತ ನೌಕಾ ಠಾಣೆಗಳು, ವೈಮಾನಿಕ ಕೇಂದ್ರಗಳು, ಆಯಕಟ್ಟಿನ ಮಾರ್ಗಗಳು ಮತ್ತು ಪ್ರಚಂಡ ಸೈನ್ಯ ಇದ್ದುದರಿಂದ ಸಮೀಪ ಪೂರ್ವ ರಾಷ್ಟ್ರಗಳಲ್ಲಿ ಅದೊಂದು ಬ್ರಿಟಿಶ್‌ರ ಭದ್ರವಾದ ಪ್ರದೇಶವಾಗಿ ಪರಿಣಮಿಸಿದೆ.

೧೯೩೦ ರಲ್ಲಿ ಬ್ರಿಟನ್ ಇರಾಕಗಳಲ್ಲಿ ಆಗಿದೆಂದು ಹೇಳಲ್ಪಡುವ ಒಪ್ಪಂದದಿಂದ ಇರಾಕದ ಸ್ವಾತಂತ್ರ್ಯ ಕಸಿದುಕೊಂಡಂತಾಗಿದೆ. ಬ್ರಿಟಿಶರ ಭದ್ರವಾದ ಸೈನಿಕ ಕೇಂದ್ರವಾಗಿ ಅದು ಪರಿಣಮಿಸಿದೆ. ಇದರಿಂದ ನೆರೆಯ ರಾಷ್ಟ್ರಗಳ ಮೇಲೆ ಒತ್ತಾಯ ತರಲು ಬ್ರಿಟನ್‌ಕ್ಕೆ ಅವಕಾಶ ಸಿಕ್ಕಿದೆ. ಇರಾಣ ಗಡಿಯಲ್ಲಿ ಬಸರಾದಲ್ಲಿ, ಮತ್ತು ಟರ್ಕಿ ಇರಾಕ ಗಡಿಯಲ್ಲಿ ಬ್ರಿಟಿಶ್‌ರು ಈಗ ತಮ್ಮ ಸೈನ್ಯವನ್ನು ಕೇಂದ್ರೀಕರಿಸುತಿರುವದು ಇದಕ್ಕೆ ಒಳ್ಳೆ ಉದಾಹರಣೆಯಾಗಿದೆ.

ಟ್ರಾನ್ಸ-ಜಾರ್ಡನ್ ರಾಷ್ಟ್ರದ ಅಮೀರ ಅಬ್ದುಲ್ಲಾರೊಡನೆ ಬ್ರಿಟನ್ ಮಾಡಿಕೊಂಡ ಒಡಂಬಡಿಕೆ ಯುಕ್ತರಾಷ್ಟ್ರಗಳ ತತ್ವಗಳಿಗೆ ತೀರ ವಿರುದ್ಧವಾಗಿದೆ. ಆ ಒಡಂಬಡಿಕೆಯನ್ವಯ ಬ್ರಿಟಿಶ್ ಸೈನ್ಯಗಳು ಟ್ರಾನ್ಸಜಾರ್ಡನ್ ರಾಷ್ಟ್ರವನ್ನು ವ್ಯಾಪಿಸಿ ಅದಕ್ಕೆ ಸ್ವಾತಂತ್ರ್ಯ ಕೊಡಲಾಗಿದೆಂಬ ಘೋಷಣೆ ಕೇವಲ ಫಾರ್ಸು ಎಂಬುದಾಗಿ ಪ್ರಜಾಪ್ರಭುತ್ವ ಪತ್ರಿಕೆಗಳ ಒಮ್ಮತದ ಅಭಿಪ್ರಾಯವಾಗಿದೆ.

## ಡಾರ್ಡನೆಲ್ಸದಲ್ಲಿ ಕೈವಾಡ

ಬ್ರಿಟಿಶ್‌ರು ಈ ರೀತಿ ಜಿಬ್ರಾಲ್ಟರ ಮತ್ತು ಸುಯೇಜ ಕಾಲುವೆಯ ಮೇಲೆ ತಮ್ಮ ಪ್ರಭುತ್ವ ನಡೆಸುವದಲ್ಲದೆ ಡಾರ್ಡನೆಲ್ಸದಲ್ಲಿಯು ತಮ್ಮ ಕೈವಾಡ ನಡೆಸುತಿರುವರು. ಅಂತರ್‌ರಾಷ್ಟ್ರೀಯ ಅಧಿಕಾರದ ದೃಷ್ಟಿಯಿಂದ ಡಾರ್ಡನೆಲ್ಸದ ಮೇಲೆ ಬ್ರಿಟನ್‌ದ ಪ್ರಭುತ್ವ ಸ್ವಲ್ಪೂ ಇರುವುದಿಲ್ಲ. ಎರಡನೇ ಮಹಾಯುದ್ಧದ ಮೊದಲು ಕೆಂಪು ಸಮುದ್ರದ ಮೇಲೆ ಬ್ರಿಟನ್‌ದ ಪ್ರಭುತ್ವ ಭದ್ರವಾಗಿದ್ದಿತು. ಏಡನ್ ಮತ್ತು ಪೆರಿಯಮದಲ್ಲಿಯ ನೌಕಾ ಮತ್ತು ವೈಮಾನಿಕ ಠಾಣೆಗಳು ಪೋರ್ಟ ಸುದಾನ ಮತ್ತು ಸೊಕೊಟ್ರಾ ದ್ವೀಪದಲ್ಲಿಯ ,ಬ್ರಿಟನ್ನದ ಪ್ರದೇಶದಿಂದ ಅದರ ಸ್ಥಾನಮಾನಗಳು ಭದ್ರವಾಗಿದ್ದವು. ಇದರಿಂದ ಅರಬೀ ಸಮುದ್ರದ ಮೇಲೆಯೂ ಅದರ ಪ್ರಭುತ್ವ ಚೆನ್ನಾಗಿದ್ದಿತು. ಈಥೋಪಿಯಾ ಮತ್ತು ಅರೇಬಿಯನ್ ದ್ವೀಪಕಲ್ಪದಲ್ಲಿಯ ರಾಷ್ಟ್ರಗಳ ಮೇಲೆಯೂ ಬ್ರಿಟನ್ ತನ್ನ ರಾಜಕೀಯ ವರ್ಚಸ್ಸನ್ನು ಪ್ರಸ್ಥಾಪಿಸುವಲ್ಲಿ ಸಾಕಷ್ಟು ದಕ್ಷತೆ ವಹಿಸಿತು. ಆದರೂ ಏರಿಟ್ರಿಯಾ ಮತ್ತು ಸೋಮಾಲಿಲ್ಯಾಂಡಿನಲ್ಲಿಯ ಇಟಲಿಯ ವಸಾಹತುಗಳಿಂದ ಕೆಂಪು ಸಮುದ್ರ ಮತ್ತು ದ್ವಾರಗಳ ಮೇಲೆ ಬ್ರಿಟನದ ಪ್ರಭುತ್ವ ನಿಯಂತ್ರಿತವಾಗಿತ್ತು.

## ಎರಡನೇ ಯುದ್ಧಾನಂತರ

ಆದರೆ ಎರಡನೇ ಮಹಾಯುದ್ಧದ ನಂತರ ಬ್ರಿಟನ್ ಭೂಮಧ್ಯ ಸಮುದ್ರದಲ್ಲಿ ತನ್ನ ರಾಜಕೀಯ ಮತ್ತು ಆಯಕಟ್ಟಿನ ಸ್ಥಾನಮಾನಗಳನ್ನು ಮತ್ತಷ್ಟು ಭದ್ರಪಡಿಸಿಕೊಂಡಿದೆ. ಅಲ್ಲದೆ ಸೈನಿಕ ಮತ್ತು ಕುಟಿಲ ಕಾರಸ್ಥಾನಗಳಿಂದ ತನ್ನ ಸ್ಥಾನಮಾನಗಳನ್ನು ಮತ್ತಷ್ಟು ವ್ಯಾಪಕಗೊಳಿಸಿದೆ. ಅದೀಗ ಭೂಮಧ್ಯ ಸಮುದ್ರದ ಎಲ್ಲ ಮಾರ್ಗ ದ್ವಾರಗಳನ್ನು ನಿಯಂತ್ರಿಸುತ್ತದೆ ಭೂಮಧ್ಯ ಸಮುದ್ರದ ಅನೇಕ ರಾಷ್ಟ್ರಗಳನ್ನು ವ್ಯಾಪಿಸಿದೆ. ಈ ದೇಶಗಳಲ್ಲಿ ಹೆಚ್ಚಿನ ಎಣ್ಣೆ

—೬ ನೇ ಪುಟಕ್ಕೆ

# ಪುಸ್ತಕ ಮತ್ತು ವಿಮರ್ಶೆ

## ಎಚ್ಚೆತ್ತ ಭಾರತ ಎತ್ತಸಾಗಿದೆ!

ಲೇ— ಶ್ರೀ ಗ. ಸ. ಹಾಲಪ್ಪ ಎಂ ಎ. ಹರಿಹರ. ಪ್ರಕಾಶಕರು ಲಿಂ. ಎ. ಸೊಸಾಯಿಟಿಯ ಸಾಹಿತ್ಯ ಸಮಿತಿ ಧಾರವಾಡ. ಕ್ರೌನ ಅಷ್ಟಪತ್ರ ೧೬೦ ಪುಟಗಳು ಬೆಲೆ ೨-೮-೦

ಭಾರತದ ರಾಜಕೀಯ ಸಮಸ್ಯೆಯನ್ನು ಚರ್ಚಿಸುವ ಇದೊಂದು ಗ್ರಂಥ. ಬ್ರಿಟಿಶ್‌ರು ಇಲ್ಲಿ ಪ್ರಭುತ್ವವನ್ನು ಪ್ರಸ್ಥಾಪಿಸಿದಂದಿನಿಂದ ಮೊನ್ನೆ ಮೊನ್ನಿನ ಮಂತ್ರಿತ್ರಯರ ರಾಯಭಾರದ ವರೆಗಿನ ಹಿಂದುಸ್ತಾನದ ರಾಜಕೀಯ ಪರಿಸ್ಥಿತಿಯನ್ನು ಇದರಲ್ಲಿ ಚರ್ಚಿಸಲಾಗಿದೆ. ಬ್ರಿಟಿಶ್‌ರ ಭೇದ ನೀತಿಯಿಂದ ಇಲ್ಲಿನ ಸಮಸ್ಯೆಗಳು ಹೇಗೆ ಜಟಿಲವಾಗುತ್ತ ನಡೆದುವು; ಈಗಲೂ ಆಗುತ್ತಿವೆ ಎಂಬುದು ಇದರಲ್ಲಿ ಚಿತ್ರಿತವಾಗಿದೆ. ಪರಕೀಯರ ಕೈವಾಡದ ಪರಿಣಾಮವಾಗಿಯೇ ಪಾಕಿಸ್ತಾನ ಬೇಡಿಕೆ ಹೇಗೆ ಮುಂದೆ ಬಂದಿತು ಅದೆಷ್ಟೊಂದು ಅವ್ಯವಹಾರ್ಯವಾಗಿದೆಂಬುದನ್ನು ವಿವರಿಸಿ ಕಲ್ಲಾಟಕದ ಮುಸಲ್ಮಾನರ ಕರ್ತವ್ಯವನ್ನು ತಿಳಿಸಿದ್ದಾರೆ. 'ಸ್ವತಂತ್ರ ಭಾರತದಲ್ಲಿ' ಎಂಬ ಪ್ರಕರಣದಲ್ಲಿ ಭಾರತದ ಭವಿಷ್ಯತ್ತು ಉಜ್ವಲವಾಗಬೇಕಾದರೆ ಏನು ಮಾಡಬೇಕೆಂಬುದನ್ನು ಚರ್ಚಿಸಿ ಸಾಮ್ಯವಾದವೆ ಇದಕ್ಕೆ ಉಪಾಯವೆಂದು ಅಭಿಪ್ರಾಯಪಟ್ಟಿದ್ದಾರೆ. 'ಎಚ್ಚೆತ್ತ ಭಾರತ ದಾಸ್ಯದ ಬೇಡಿಗಳನ್ನು ಮುರಿದೆಸೆದು ಸ್ವಾತಂತ್ರ್ಯದ ಚಂದ್ರಾಯುಧವನ್ನು ಕೈಯಲ್ಲಿ ಹಿಡಿದು ನವ ಬಾಳಗೀತೆ ಹಾಡುತ್ತಾ ನವಸೃಷ್ಟಿಯ ಕಡೆ ಓಡುತಿದೆ ಎಂದು ಗ್ರಂಥಕರ್ತರು ಹಾಡಿದ್ದಾರೆ. ರಾಜಕೀಯ ಸಮಸ್ಯೆಗಳನ್ನು ಚರ್ಚಿಸುವ ಪುಸ್ತಕಗಳು ಕನ್ನಡದಲ್ಲಿ ವಿರಳ. ಅದರಲ್ಲಿಯೂ ಬ್ರಿಟಿಶರು ಭಾರತಕ್ಕೆ ಬಂದ ಕಾಲದಿಂದ ಸದ್ಯದ ಪರಿಸ್ಥಿತಿಯ ವರೆಗಿನ ವ್ಯಾಪಕ ಕ್ಷೇತ್ರವನ್ನು ತೆಗೆದುಕೊಂಡು ವಿಹಂಗಮ ದೃಷ್ಟಿಯಿಂದ ಸಮಸ್ಯೆಗಳನ್ನೆಲ್ಲ ಚರ್ಚಿಸಿದ ಗ್ರಂಥಗಳು ಕನ್ನಡದಲ್ಲಿ ಇಲ್ಲವೆ ಇಲ್ಲೆಂದು ಹೇಳಬಹುದು. ಅಲ್ಲಲ್ಲಿ ವ್ಯಂಗಚಿತ್ರಗಳನ್ನು ಕೊಟ್ಟು ವಿಷಯ ತಿಳಿದುಕೊಳ್ಳಲು ಅವಕಾಶ ಕಲ್ಪಿಸಿ ಕೊಟ್ಟಿರುವರಲ್ಲದೆ ಅದಷ್ಟು ಆಕರ್ಷಕ ಮಾಡಿರುವರು. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಚಳವಳಿಯನ್ನು ಚಿತ್ರಿಸಿರುವ ಈ ಗ್ರಂಥವನ್ನು ಸ್ವಾತಂತ್ರ್ಯಕ್ಕಾಗಿಯೇ ದೇಹವನ್ನು ಸವಿಸಿ ಹುತಾತ್ಮರಾದ ಮೈಲಾರ ಮಹಾದೇವಪ್ಪನವರಿಗೆ ಅರ್ಪಿಸಿದ್ದು ಅತ್ಯಂತ ಉಚಿತವಾಗಿದೆ. ಮಾನ್ಯ ಪಾಟೀಲ ಕಲ್ಲನಗೌಡರು ಇದಕ್ಕೆ ಮುನ್ನುಡಿ ಬರೆದು ಗ್ರಂಥದ ಮಹತ್ವವನ್ನು ಹೆಚ್ಚಿಸಿದ್ದಾರೆ. ಭಾಷೆ ತಿಳಿಯಾಗಿದ್ದು ಹುರುಪಿನದಾಗಿದೆ. ಮುದ್ರಣ ಮತ್ತು ಮೇಲ್ಹೊದಿಕೆ ಆಕರ್ಷಕವಾಗಿವೆ. ಕನ್ನಡಿಗರು ಇದನ್ನು ಓದಿ ರಾಜಕೀಯ ಸಮಸ್ಯೆ ತಿಳಿದುಕೊಳ್ಳುವುದಲ್ಲದೆ ಗ್ರಂಥಕರ್ತರನ್ನು ಪ್ರೋತ್ಸಾಹಿಸಬೇಕು.

## ಚಿತ್ತಗಾಂಗ್ ಕ್ರಾಂತಿ ವೀರರು

ಲೇ— ಕಲ್ಪನಾದತ್ತ. ಅನುವಾದಕರು ಲಲಿತಾ-ಪ್ರಕಾಶಕರು ಜನತಾ ಸಾಹಿತ್ಯ ಹುಬ್ಬಳ್ಳಿ ಕ್ರೌನ ಅಷ್ಟಪತ್ರದ ೧೦೦ ಪುಟಗಳು. ಬೆಲೆ ೧ ರೂಪಾಯಿ.

೧೯೩೦ ಎಪ್ರಿಲ ೧೮ ಕ್ಕೆ ಚಿತ್ತಗಾಂಗ್ ಶಸ್ತ್ರಾಗಾರ, ಪೋಲೀಸ ಠಾಣೆ ಮತ್ತು ಟೆಲಿಗ್ರಾಫ ಕಚೇರಿಗಳ ಮೇಲೆ ದಾಳಿ ಆದುದು ಹಿಂದುಸ್ತಾನದ ಇತ್ತೀಚೆಗಿನ ಘಟನೆಗಳನ್ನು ಬಲ್ಲವರಿಗೆಲ್ಲ ಗೊತ್ತು. ಈ ಚಿತ್‌ಗಾಂಗ್ ದಾಳಿ ಎಂತು ಹೂಡಲ್ಪಟ್ಟಿತು ಅದರಲ್ಲಿದ್ದವರಾರು ಮುಂತಾದ್ದು ಮಾತ್ರ ಅನೇಕರಿಗೆ ಗೊತ್ತಿರಲಿಕ್ಕಿಲ್ಲ. ಅದನ್ನು ವಿವರಿಸುವ ಪ್ರಸ್ತುತ ಪುಸ್ತಕವನ್ನು ಆ ಕ್ರಾಂತಿಕಾರರಲ್ಲೊಬ್ಬರಾದ ಕಲ್ಪನಾದತ್ತರು ಬರೆದಿರುವರು. ಇದರಲ್ಲಿ ಆ ಕ್ರಾಂತಿಕಾರ ಏಳು ಜನರ ಧೈರ್ಯ ಸಾಹಸಗಳು ವರ್ಣಿಸಲ್ಪಟ್ಟಿವೆ. ಜತೆಯಲ್ಲಿಯೇ ಕಮ್ಯೂನಿಸ್ಟ ಪಕ್ಷದ ಪ್ರಚಾರವೂ ಇದೆ. ಚಿತಗಾಂಗ ದಾಳಿಯ ಬಗ್ಗೆ ಮತ್ತು ಆ ದಾಳಿಗಾರರ ಬಗ್ಗೆ ತಿಳಿಯಬಯಸುವ ಕನ್ನಡಿಗರು ಈ ಪುಸ್ತಕವನ್ನು ಓದಬಹುದಾಗಿದೆ. ಕ್ರಾಂತಿಕಾರರ ಮಾರ್ಗದ ಬಗ್ಗೆ ಭಿನ್ನಾಭಿಪ್ರಾಯವಿದ್ದರೂ ಅವರ ಧೈರ್ಯ ಸ್ಥೈರ್ಯ ಸಂಘಟನೆ ಮೊದಲಾದವುಗಳು ಪ್ರಶಂಸನೀಯವಾಗಿವೆ.

## ಶ್ರೀಮದ್ ಭಗವದ್‌ಗೀತಾ ಪರಿಚಯ

ಲೇ— ಶ್ರೀ ಬಾಳಾಚಾರ್ಯ ಮಂಗಳವೇಡಿ ಹುಬ್ಬಳ್ಳಿ ೩೭. ಪುಟಗಳ ಪುಟ್ಟ ಪುಸ್ತಕ. ಬೆಲೆ ನಾಲ್ಕಾಣೆ.

ಇದರಲ್ಲಿ ಗೀತೆಯ ಹುಟ್ಟು ಶ್ರೀಕೃಷ್ಣ ಅರ್ಜುನ ಸಂವಾದ ಎಂಬ ಎರಡು ಪ್ರಕರಣಗಳಿದ್ದು ಕೊನೆಯಲ್ಲಿ ಆರಿಸಿದ ಕೆಲವು ಶ್ಲೋಕಗಳನ್ನು ಕೊಟ್ಟಿರುವರು. ಸ್ವಲ್ಪದರಲ್ಲಿಯೆ ಭಗವದ್ಗೀತೆಯ ಪರಿಚಯ ಮಾಡಿಕೊಡುವ ಪ್ರಯತ್ನವನ್ನು ಈ ಗ್ರಂಥದಲ್ಲಿ ಮಾಡಿದ್ದಾಗಿದೆ. ಭಗವದ್ಗೀತೆಯ ಮೇಲೆ ಎಷ್ಟು ಗ್ರಂಥ ಹೊರಟರೂ ಕಡಮೆಯೆ. ಅಷ್ಟೊಂದು ಗಂಭೀರ ಹಾಗು ಮಹತ್ವದ್ದಾಗಿದೆ ಅದು. ಇದನ್ನನುಲಕ್ಷಿಸಿದರೆ ಆಚಾರ್ಯರು ಇದನ್ನು ಬರೆದು ಕನ್ನಡಿಗರ ಮೇಲೆ ಉಪಕಾರ ಮಾಡಿದ್ದಾರೆಂದು ಹೇಳಬಹುದು. ವೇದಾಂತ ತತ್ವಗಳನ್ನು ತಿಳಿಸುವ ಇಂಥವೇ ಸಣ್ಣ ಪುಸ್ತಕಗಳನ್ನು ಆಚಾರ್ಯರು ಬರೆಯಲೆಂದು ಆಸಿಸಿ ಕನ್ನಡಿಗರು ಇದರ ಲಾಭ ಪಡೆಯುವರೆಂದು ನಂಬುತ್ತೇವೆ.

## ಶ್ರೀಗುರು ಸಾರ್ವಭೌಮ

ಲೇ— ಜಿ. ಎಸ್. ಕೃಷ್ಣರಾವ ಪರಿಮಳ ಸಾಹಿತ್ಯ ಮಂದಿರ ಬೆಂಗಳೂರು ಸಿಟಿ. ಕ್ರೌನ ಅಷ್ಟಪತ್ರದ ೧೪೪ ಪುಟಗಳು ಬೆಲೆ ೧-೮-೦. ಅಂಚೆ ವೆಚ್ಚ ಪ್ರತ್ಯೇಕ.

ಪರಿಮಳ ಸಾಹಿತ್ಯ ಮಾಲೆಯ ಕುಲದೀಪಕರು ೧ ನೇ ಪುಷ್ಪವು. ಈ ಗ್ರಂಥ ಮಾಲೆಯಲ್ಲಿ ಐತಿಹಾಸಿಕ ಪುರುಷರ ಸಾಧು ಸಂತರ, ಭಕ್ತ ಭಾಗವತರ ಪವಿತ್ರ ಕಥಾಮೃತವನ್ನೂ ತೀರ್ಥಕ್ಷೇತ್ರಗಳ ಇತಿಹಾಸವನ್ನೂ ಕ್ರಮಶಃ ಕೊಡಲಾಗುವದೆಂದು ಸಂಪಾದಕರು ಆಶ್ವಾಸನ ಕೊಟ್ಟಿದ್ದಾರೆ. ಪ್ರಸ್ತುತ ಪುಸ್ತಕದಲ್ಲಿ ಶ್ರೀಮನ್ಮಂತ್ರಾಲಯ ಮಠದ ಶ್ರೀಮದ್ರಾಘವೇಂದ್ರ ಸ್ವಾಮಿಗಳ ಚರಿತ್ರೆಯನ್ನೂ ಅವರ ಅಗಾಧ ಮಹಿಮೆಯನ್ನೂ ತಿಳಿಗನ್ನಡದಲ್ಲಿ ವರ್ಣಿಸಲಾಗಿದೆ. ಪ್ರಲ್ಹಾದಾವತಾರಿಗಳಾದ ಅವರು ಭೂಮಿಯಲ್ಲಿ ಅವತರಿಸಿ ಪತಿತರ ಮತ್ತು ಸಜ್ಜನರ ಉದ್ಧಾರ ಮಾಡಿ ಮಾಧ್ವ ಮತದ ತತ್ವಗಳನ್ನು ಪ್ರಚಾರ ಮಾಡಿದ್ದು ಸರ್ವಶ್ರುತ. ಅವರ ಆ ದಿವ್ಯ ಚರಿತ್ರೆಯನ್ನು ಈ ಲೇಖಕರು ಬಣ್ಣಿಸಿದ್ದಾರೆ. ಪರಮಾತ್ಮನ ಭಕ್ತರ, ಐತಿಹಾಸಿಕ ಪುರುಷರ ಚರಿತ್ರೆಗಳು ಪ್ರಸಿದ್ಧವಾದಷ್ಟು ಅವಶ್ಯವೇ. ಏಕೆಂದರೆ ಇಂಥ ಮಹಾನುಭಾವರ ಚರಿತ್ರೆಯಿಂದ ತೆಗೆದುಕೊಳ್ಳುವ ಬೋಧ ಬೇಕಾದಷ್ಟು ಇರುವದು. ಪ್ರಸ್ತುತ ಲೇಖಕರು ಇಂಥ ಪುಸ್ತಕಗಳನ್ನು ಪ್ರಸಿದ್ಧಿಸುವ ಆಶ್ವಾಸನ ಕೊಟ್ಟಿದ್ದು ಕನ್ನಡಿಗರು ಯೋಗ್ಯ ಪ್ರೋತ್ಸಾಹನೆ ಕೊಟ್ಟು ಅವರಿಂದ ಆ ಕೃತಿಗಳು ಹೊರಬೀಳುವಂತೆ ನೋಡಿಕೊಳ್ಳಬೇಕು.

## ನಮ್ಮ ಮುಡುಪು

ಪ್ರಧಾನ ಸಂಪಾದಕರು ಶ್ರೀ ಜಿ. ಎಂ. ಮಿರಜಿ ವಕೀಲರು ಹುಬ್ಬಳ್ಳಿ. ಹುಬ್ಬಳ್ಳಿಯಲ್ಲಿ ಕೂಡಿದ ಧಾರವಾಡ ಜಿಲ್ಹೆಯ ೬ನೇ ಕನ್ನಡ ಸಾಹಿತ್ಯ ಸಮ್ಮೇಲನದ ಕಾಲಕ್ಕೆ ಪ್ರಕಟವಾದ ಪುಸ್ತಕವಿದು. ಇದರಲ್ಲಿ ಪದ್ಯ ಮತ್ತು ಗದ್ಯ ಭಾಗಗಳಿದ್ದು ಕೊನೆಯಲ್ಲಿ ಲೇಖಕರ ಪರಿಚಯವಿದೆ.

ಪ್ರೊ. ಸವಣೂರ ಇವರ 'ಅಕ್ಕನು ವಿಜ್ಞಾನಿಯೇ' ಎಂಬ ಬರೆಹ ಮತ್ತು ಶ್ರೀ. ವ. ರಾ. ಉಮ್ಮರ್ಜಿಯವರ 'ಕನ್ನಡದ ಹ್ರಸ್ವ ಎ. ಒ ಗಳ ಮೇಲೆ ಹೊಸ ಬೆಳಕು' ಎಂಬ ಲೇಖಗಳು ಸಂಶೋಧನಾತ್ಮಕವಾಗಿವೆ. ಅಲ್ಲದೆ ಬೇರೆ ಹಲವು ಲೇಖಗಳು ಮತ್ತು ಕತೆಗಳು ವಾಚನೀಯವಾಗಿವೆ. ಪದ್ಯ ಭಾಗದಲ್ಲಿ ೧೨ ಕವಿತೆಗಳಿದ್ದು ಶ್ರೀ ಗಂಗಪ್ಪಾ ವಾಲಿ, ಕರಗುದರಿ, ಪ್ರಲ್ಹಾದರಾವ ಸರೀಗಲ್ಲ ಅವರ ಪತ್ನಿ ಸೌ. ಇಂದಿರಾಬಾಯಿ, ಕುಮಾರ ರನ್ನ, ಗಿರಿಜಮ್ಮ ಇಚ್ಚಂಗಿಮಠ ಮೊದಲಾದವರ ಕವಿತೆಗಳು ಇವೆ. ಸಾಹಿತ್ಯ ಸಮ್ಮೇಲನ ಹುಬ್ಬಳ್ಳಿಯಲ್ಲಿ ಕೂಡಿದುದರ ಸ್ಮಾರಕ ಉಳಿಯುವ ದೃಷ್ಟಿಯಿಂದ ಪುಸ್ತಕ ಹೊರಡಿಸಿದ್ದು ಅಭಿನಂದನೀಯ ಮತ್ತು ಅನುಕರಣೀಯವಾಗಿದೆ.

## ಸ್ವತಂತ್ರ ಗ್ರಾಮ ಸಮಾಜ

ಲೇ— ಹಿ. ರಾಮರಾಯ ಮಲ್ಯ. ಜೀವನ ಸಾಹಿತ್ಯ ಪ್ರಕಟನೆ ೧. ದಿ. ಮಂಗಳೂರು ಟ್ರೇಡಿಂಗ ಅಸೋಸಿಯೇಶನ್ ಲಿಮಿಟೆಡ್ ಮಂಗಳೂರು. ಕ್ರೌನ ಅಷ್ಟಪತ್ರದ ೫೬ ಪುಟಗಳು. ಬೆಲೆ ಎಂಟಾಣೆ.

ಹಿಂದುಸ್ತಾನ ಹಳ್ಳಿಗಳ ನಾಡು ಇಲ್ಲಿನ ಏಳು ಲಕ್ಷ ಹಳ್ಳಿಗಳು ಬ್ರಿಟಿಶರ ಪ್ರಭುತ್ವ ಬಂದಾಗಿನಿಂದ ಮುರುಕಲ ಸ್ಥಿತಿಗೆ ಮುಟ್ಟಿವೆ ಇಲ್ಲಿನ ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಸ್ವಾತಂತ್ರ್ಯವಿಲ್ಲದಂತಾಗಿದೆ. ಇದನ್ನು ಕಂಡುಹಿಡಿದು ಮಹಾತ್ಮಾ ಗಾಂಧಿಯವರು ಹಳ್ಳಿಗರ ಪುನರುಜ್ಜೀವನಕ್ಕಾಗಿ ಏನು ಮಾಡಬೇಕೆಂಬುದನ್ನು ಭಾರತೀಯರಿಗೆ ಬರೆಹ, ಭಾಷಣಗಳಿಂದ ತಿಳಿಸುತ್ತಿದ್ದಾರೆ. ಗ್ರಾಮ ಸಮಾಜವನ್ನು ಚಿತ್ರಿಸುವ ಇದೊಂದು ಗ್ರಂಥ. ಶ್ರೀ ಮಲ್ಯರು ಮಹಾತ್ಮರ ತತ್ವಗಳನ್ನು ತಿಳಿದುಕೊಂಡು ಆಚರಣೆಯಲ್ಲಿ ತರಲು ಪ್ರಯತ್ನಿಸುವವರಲ್ಲಿ ಒಬ್ಬರು. ಗಾಂಧೀಜಿಯವರ ಆದರ್ಶವನ್ನೆ ಅವರು ಈ ಪುಸ್ತಕದಲ್ಲಿ ಇಟ್ಟಿದ್ದಾರೆ. ಹಳ್ಳಿಗಳ ವಿವಿಧ ಸಮಸ್ಯೆಗಳು ಅವುಗಳ ಪರಿಹಾರೋಪಾಯಗಳು ಇದರಲ್ಲಿ ವರ್ಣಿತವಾಗಿವೆ. ಹಿಂದುಸ್ತಾನದ ಹಳ್ಳಿಗಳ ಉದ್ಧಾರವಾಗಬೇಕಾದರೆ ಪಾಶ್ಚಾತ್ಯರ ಅಂಧಾನುಕರಣ ಉಪಯುಕ್ತವಾಗದು, ಗಾಂಧೀಜಿಯವರ ಆದರ್ಶ ಹಳ್ಳಿಯ ಚಿತ್ರವೆ ಉಪಯುಕ್ತವಾದುದೆಂದು ಅನೇಕರು ಒಪ್ಪಹತ್ತಿರುವರು. ಅಂಥ ಆದರ್ಶ ಚಿತ್ರವನ್ನು ಪ್ರಸ್ತುತ ಲೇಖಕರು ಜನತೆಯ ಮುಂದಿಟ್ಟು ಉಪಕಾರ ಮಾಡಿದ್ದಾರೆ. ಕನ್ನಡಿಗರೆಲ್ಲ ವಿಶೇಷತಃ ಹಳ್ಳಿಗಳಲ್ಲಿ ಕೆಲಸ ಮಾಡಬಯಸುವವರು ಈ ಪುಸ್ತಕದಲ್ಲಿಯ ಮಹತ್ವದ ವಿಷಯವನ್ನು ಓದಿ ಅರಗಿಸಿಕೊಂಡು ಹಳ್ಳಿಗರ ಉದ್ಧಾರ ಕಾರ್ಯದಲ್ಲಿ ತೊಡಗಿದರೆ ಲೇಖಕರ ಪರಿಶ್ರಮ ಸಾರ್ಥಕವಾಗುವದು. ಈ ಪ್ರಕಾಶನಮಾಲೆಯಲ್ಲಿ ಇದೇಬಗೆಯ ಉಪಯುಕ್ತ ಪುಸ್ತಕಗಳನ್ನು ಪ್ರಸಿದ್ಧಿಸುವ ಆಶ್ವಾಸನವನ್ನು ಸಂಪಾದಕರು ಕೊಟ್ಟಿದ್ದಾರೆ. ಎಲ್ಲರೂ ಇದರ ಲಾಭ ಪಡೆಯಬೇಕೆಂದು ಕೋರುತ್ತೇವೆ.

## ನರಸಿಂಹ

ಸಂಪಾದಕರು:—ನಾಡಗೀರ ರಘುನಾಥ. ಸಂಪುಟ ೫ ಸಂಚಿಕೆ ೧ ವಾರ್ಷಿಕ ವಂತಿಗೆ ೨ ರೂ. ಬಿಡಿ ಪ್ರತಿ ಎರಡಾಣೆ ನರಸಿಂಹ ಕಚೇರಿ ಸಾಧನಕೇರಿ ಧಾರವಾಡ

'ಯುದ್ಧದ ಜಳದಿಂದ ಕಮರಿದ ನರಸಿಂಹನು ಐದು ವರುಷ ಅಜ್ಞಾತವಾಸದಲ್ಲಿದ್ದನು. ಯುದ್ಧೋತ್ತರ ಪುನರ್ರಚನೆಯ ಕಾರ್ಯಕ್ರಮದ ಅಂಗವಾಗಿ ಹೊರಬಂದಿದ್ದಾನೆ' ಎಂದು ಸಂಪಾದಕರು ಬರೆದಿದ್ದಾರೆ. ಶ್ರೀರಂಗರು ನರಸಿಂಹನ ದೃಷ್ಟಿ ಏನು ಎಂಬುದನ್ನು ವಿವರಿಸುತ್ತ 'ಜಗತ್ತೆ ಒಂದು ಕುಟುಂಬ ಎಂಬ ವಿಶಾಲ ದೃಷ್ಟಿಯನ್ನಿಟ್ಟುಕೊಂಡಾಗಲೂ ವ್ಯಕ್ತಿಯೆ ಕುಟುಂಬದ ತಳಹದಿ ಎಂಬ ತತ್ವವನ್ನರಿತು ಕರ್ನಾಟಕ, ಕನ್ನಡ, ಇದು ಪ್ರಪಂಚ ಕುಟುಂಬದ ತಳಹದಿ ಎಂದು ನರಸಿಂಹನು ತನ್ನ ಧ್ಯೇಯದ ದಾರಿಯನ್ನು ಗೊತ್ತುಮಾಡಿಕೊಂಡಿದ್ದಾನೆ' ಎಂದು ಹೇಳಿ ಸಿಂಹನ ಧೈರ್ಯ ಬೇಕಾಗಿದೆ ಇಂದು ನರನಿಗೆ.... ಧ್ಯೇಯಕ್ಕಾಗಿ ದೂರದೃಷ್ಟಿಯನ್ನಿಡುವ —೧೬ನೇ ಪುಟಕ್ಕೆ

## ದೀಪಾವಳಿ ಸಂದೇಶ

ಏಕೆ ಹೇಳಿದ ಗಾಂಧಿ! ಬೇಕೆಂದೆ ಜಗಕೆಲ್ಲ!  
ಮಾಡಬೇಡಿರಿ ಹಬ್ಬ! ಮಾಡಬೇಡಿರಿ ಎಂದು ‖  
ನೌಖಾಲಿಯದೋ ನೋಡು ಖಾಲಿಯಾಗಿಹುದು!  
ಜಾತಿಜಗಳದ ಬೆಂಕಿ ಜಗವೆಲ್ಲ ಹಬ್ಬಿಹುದು‖  
ಚೂರಿ ಚಾಕುಗಳಿರಿತದಿಂದ ಬೆನ್ನಟ್ಟಿ  
ಸುಡುತಿಹುದು ಎಲ್ಲರನು ಸುತ್ತುಗಟ್ಟಿ ‖[illegible]‖

ಚೂರಿ ಚಾಕುಗಳಿಂದು ಇರಿದು ಚಲ್ಲಿಹ ದೇ[illegible]  
ಸಿಡಿದ ಗುಂಡುಗಳಿಂದ ಸುಟ್ಟುಹೋಗಿಹ ದೆ[illegible]  
ಇವು ಎಲ್ಲ ನಿನಗಾಗಿ ಅರ್ಪಿತವು ನೈವೇದ್ಯ!  
ಹರಿದಿರುವ ರಕ್ತದಿಂ ನಿನಗೆ ಮಂಗಳಸ್ನಾನ‖[illegible]‖

ಸುಡುತಿರುವ ಮನೆಗಳೇ ಸಾಲು ದೀಪಗಳು!  
ಇಡುತಿರುವ ಬೊಬ್ಬೆಗಳೇ ನಿನಗೆ ವಾದ್ಯಗಳು‖  
ಹಿಂದಮಾತೆಯೆ ನಿನಗೆ ಇಂದು ಅರ್ಪಿತವು!  
ಇಷ್ಟೆಲ್ಲ ಇರಲು ಇನ್ನೇಕೆ ಹಬ್ಬಗಳು ‖೩‖

ಇನ್ನಾದರೂ ತಾಯೇ ನೀ ಪ್ರಸನ್ನಳಾಗು!  
ಕಣ್ತೆರೆದು, ಶಾಂತಿಯನು ಜಗಕೆಲ್ಲ ಬೀರು ‖೪‖

—ಚಕ್ರಧಾರಿ (ಕನ್ನಡ ಜಾಣ)

* * * *

## ಮುದುಕಿ

ಪಡುವಣ ತೀರದ  
ಕನ್ನಡ-ನಾಡೊಳು  
ಮರೆಯಲಿ ಮೆರೆವುದು ಊರೊಂದು  
ಕಡುಪಾತಕರಾ  
ನೆಟ್ಟನೆ ತಾರಿಪ  
ಬಿರುದಿನ ಬೀರದ ಸಿರಿಯಿಂದೆ ‖ ‖೧‖

ಊರಿನ ನೆರೆಯಲಿ  
ಉಸುಕಿನ ಬಯಲಲಿ  
ಎಲೆವನೆಯೊಂದನು ತಾ ಮಾಡಿ ‖  
ದೂರದ ಜನರಿಗೆ  
ಉಪ್ಪನು ನೀಡುವ  
ಕಾಯಕವೊಂದದ ಸಲೆಹೂಡಿ ‖೨‖

ಇರುವಳು ಮುದುಕಿಯು  
ಕರಕರೆ ಗೊಳ್ಳದೆ  
ದುಡಿವಳು, ಬೇಡಳು ನೆರವನ್ನು ‖  
ನೆರಮನೆ ಮಕ್ಕಳು  
ಮನರಂಜನಕೇ  
ಕೇಳ್ವರು ಕತೆಗಳ ನವಳನ್ನು ‖೩‖

ಮಳೆ ಬಿಸಿಲೆನ್ನಳು  
ಚಳಿ ಬೆಮರೆನ್ನಳು  
ಇರುವಳು ಕಡಲಿನ ತಡಿಯಲ್ಲಿ ‖  
ಪುಳುವಾನಿಸದೊಳು  
ಪುಳುತಾನೆಂಬಳು  
ಮೆರೆವಳು ಗೆಯ್ತದ ಮರಿಯಲ್ಲಿ ‖೪‖

"ಕರ್ಮಕೆ ನೀ ದೊರೆ  
ಫಲವನು ನೀ ಮರೆ"  
ಎಂಬರು ಲೋಕದ ಜನರೆಲ್ಲ ‖  
"ಚರ್ಮವ ತೊಳೆದೊಡೆ  
ಕರ್ಮವು ಪೋಗದು"  
ಎಂಬುದೆ ನೀತಿಯ ಮಾತೆಲ್ಲಿ ‖೫‖

ಕಾಯಕದೊಳು ಮರೆ-  
ಯುತೆ ಜಗವನು ತಾ  
ಇರುವಳು ಮುನಿಗಳ ತೆರದಿಂದೆ ‖  
ಹೇಯದ ಜೀವನ-  
ವೆನ್ನಳು; ಸೊಗವನು  
ನೋಡಳು ತನ್ನಯೆ ರತಿಯಿಂದೆ ‖೬‖

—ಶೇಶಂ.



# ಸಂಪಾದಕೀಯ * * * *

# ಟೀಕೆ - ಟಿಪ್ಪಣೆಗಳು

## ಭಾಷಾವಾರ ಪ್ರಾಂತೀಕರಣ

ಭಾಷಾನ್ವಯ ಪ್ರಾಂತಗಳನ್ನು ರಚಿಸಬೇಕೆಂಬ ತತ್ವ ಮಾನ್ಯವಾಗಿದೆ. ಕಾಂಗ್ರೆಸ್ಸಿನಂಥ ಮಹತ್ವದ ಸಂಸ್ಥೆ ತನ್ನ ಆಡಳಿತದಲ್ಲಿ ಭಾಷಾನ್ವಯ ಪ್ರಾಂತಗಳನ್ನು ರಚಿಸಿಕೊಂಡಿದೆ. ಕಾಂಗ್ರೆಸ್ಸು ಈಗ ಅಧಿಕಾರದಲ್ಲಿ ಬಂದದ್ದರಿಂದ ಭಾಷಾನ್ವಯ ಪ್ರಾಂತ ರಚನೆಯ ಪ್ರಶ್ನೆಗೆ ಮತ್ತೆ ಪ್ರೋತ್ಸಾಹ ದೊರೆತಂತಾಗಿದೆ. ಅಲ್ಲದೆ ಘಟನಾಸಮಿತಿ ಬೇಗನೆ [illegible] ಹಿಂದುಸ್ತಾನದ ಹೊಸ ಘಟನೆಯನ್ನು [illegible]ಪಡಿಸಲಿರುವದರಿಂದ ಈಗಲೆ ಭಾಷಾನ್ವಯ ಪ್ರಾಂತರಚನೆಯ ನಿರ್ಣಯವನ್ನೂ ಕೈಕೊಳ್ಳಬಹುದಾಗಿದೆ. ಘಟನಾಸಮಿತಿ ಈ ಪ್ರಶ್ನೆಯನ್ನು ಎತ್ತಲಾರದು, ಎಂಬ ವಾದವೊಂದು ಮಧ್ಯದಲ್ಲಿ ಉಪಸ್ಥಿತವಾಗಿದ್ದರಿಂದ ಭಾಷಾನ್ವಯ ಪ್ರಾಂತರಚನೆಗಾಗಿ ಕೊರಗುತ್ತಿದ್ದ ಜನರು ಮತ್ತೆ ನಿರಾಶೆ ಹೊಂದಿದ್ದರು. ಆದರೆ ಡಾ. ಪಟ್ಟಾಭಿಯವರು ಈ ಸಂಬಂಧದಲ್ಲಿ ಪ್ರಕಟನೆ ಹೊರಡಿಸಿ ಘಟನಾ ಸಮಿತಿ ಇಂಥ ಪ್ರಶ್ನೆಯನ್ನು ನಿರ್ಣಯಿಸದಿದ್ದರೆ (ಅದನ್ನು ರಚಿಸುವದಾದರೂ ಏಕೆ ಎಂದು ಮುಂತಾಗಿ ಅಭಿಪ್ರಾಯ ಪಟ್ಟರುವರು. ಹಿಂದುಸ್ತಾನದ ಘಟನೆಯನ್ನು ಸಿದ್ಧಪಡಿಸಲಿರುವ ಘಟನಾ ಸಮಿತಿ ಸದ್ಯದ ಪ್ರಾಂತಗಳನ್ನು ಭಾಷಾನ್ವಯ ಪುನರ್ವಿಭಜಿಸಬೇಕೆಂದು ಸೂಚಿಸಿ ಅದಕ್ಕಾಗಿ ಸೀಮಾ ನಿರ್ಣಾಯಕ ಸಮಿತಿಯನ್ನು ನೇಮಿಸಬೇಕೆಂದು ಸೂಚಿಸಲು ಏನೂ ಅಭ್ಯಂತರವಿಲ್ಲ. ಅಂತೆಯೇ ಈ ಸಮಯದಲ್ಲಿ ಭಾಷಾನ್ವಯ ಪ್ರಾಂತರಚನೆಯ ಪುರಸ್ಕರ್ತರು ಹೆಚ್ಚು ಸಂಘಟಿತರಾಗಿ [illegible]ಸಬೇಕಾಗಿದೆ. ಸದ್ಯದ ಕಾವು ಆರಗೊಟ್ಟರೆ ಇನ್ನೂ ಹತ್ತು ವರುಷಗಳವರೆಗೆ ಈ ಪ್ರಶ್ನೆಯ ವಿಚಾರ ನಡೆಯಲಿಕ್ಕೇ ಇಲ್ಲ. ಏಕೆಂದರೆ ಈಗ ಘಟನಾ ಸಮಿತಿ ಹಿಂದುಸ್ತಾನದ ಘಟನೆಯನ್ನು ಸಿದ್ಧಮಾಡಿ ಬಿಟ್ಟಿತೆಂದರೆ ಮುಂದೆ ಹತ್ತು ವರ್ಷಗಳವರೆಗೆ ಅದರ ಪುನರ್ವಿಚಾರ ಸಾಮಾನ್ಯವಾಗಿ ಆಗಲಾರದು. ಅಂತೆಯೇ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ಮೊದಲಾದ ಪ್ರಾಂತಗಳಲ್ಲಿಯ ಹೊಣೆಗಾರ ಕಾರ್ಯಕರ್ತರು ಉತ್ಸಾಹದಿಂದ ಕಾರ್ಯಕ್ಕಣಿಯಾಗಿದ್ದಾರೆ. ಘಟನಾ ಸಮಿತಿ ಕೂಡುವ ಕಾಲಕ್ಕೆ ಒಂದು ಪರಿಷತ್ತನ್ನು ಸೇರಿಸಿ ಈ ಬಗ್ಗೆ ಸಂಘಟಿತ ಪ್ರಯತ್ನ ಮಾಡಬೇಕೆಂದು ಬಗೆದಿರುವರು. ಈ ಪ್ರಯತ್ನ ಅಭಿನಂದನೀಯವೆಂದು ಬೇರೆ ಹೇಳಬೇಕಿಲ್ಲ.

## ಶಾಸನ ಸಭೆಯಲ್ಲಿ ಗೊತ್ತುವಳಿ

ಈ ರೀತಿ ಪ್ರಯತ್ನ ನಡೆದಿರುವಾಗಲೆ ಕೇಂದ್ರ ಶಾಸನ ಸಭೆಯಲ್ಲಿ ಒಂದು ಗೊತ್ತುವಳಿಯೂ ಇದೇ ೧೬ ನೇ ತಾರೀಕು ಬರಲಿದೆ. ಭಾಷೆ ಮತ್ತು ಸಾಂಸ್ಕೃತಿಕ ತಳಹದಿಯ ಮೇಲೆ ಈಗಿನ ಪ್ರಾಂತಗಳನ್ನು ಪುನರ್ರಚಿಸಬೇಕು ಎಂಬುದೆ ಈ ಗೊತ್ತುವಳಿಯ ಆಶಯ. ಪಂಡಿತ ಠಾಕೂರದಾಸ, ಲಾಲಾ ದೇಶಬಂಧು ಗುಪ್ತ ಮತ್ತು ಹಿರಿಯವರು ಈ ಬಗೆಯ ಗೊತ್ತುವಳಿಗಳನ್ನು ಕಳಿಸಿದ್ದು ಅವುಗಳಿಗೆ ಪ್ರಥಮ ಸ್ಥಾನ ದೊರತಿದೆ. ದೇಶಬಂಧು ಗುಪ್ತರ ಗೊತ್ತುವಳಿ ಸ್ವಲ್ಪ ಭಿನ್ನವಾಗಿದೆ. ಸೀಮಾ ನಿರ್ಣಯ ಸಮಿತಿಯ ಅಭಿಪ್ರಾಯವನ್ನು ಬೇಗನೆ ತರಿಸಿಕೊಂಡು ಘಟನಾ ಸಮಿತಿಯು ಬೇರೆ ಬೇರೆ ಗುಂಪುಗಳಲ್ಲಿ ಸೇರುವ ಮೊದಲೆ ಗವರ್ನರ ಜನರಲ್ಲರು ಸೂಕ್ತ ಉಪಾಯ ಕೈಕೊಳ್ಳಬೇಕೆಂದು ಗುಪ್ತರು ಸೂಚಿಸಿದ್ದಾರೆ. ಶ್ರೀ ಹಿರೆಯವರು ತರಲಿರುವ ಗೊತ್ತುವಳಿಯ ಮೇಲೆ ಕರ್ನಾಟಕದ ಪರವಾಗಿ ಶ್ರೀ ಕರಮರಕರರು ಮಾತಾಡುವರೆಂದು ತಿಳಿಯುತ್ತದೆ. ಮೇಲೆ ಹೇಳಿದಂತೆ ಘಟನಾಸಮಿತಿ ಈ ಪ್ರಶ್ನೆಯನ್ನು ವಿಚಾರಿಸಲಾರದೆಂಬ ಘಟನಾ ಸಮಿತಿಯ ಸಲಹೆಗಾರ ಶ್ರೀ ಬಿ. ಎನ್. ರಾಯರ ಅಭಿಪ್ರಾಯವನ್ನು ಬಿಟ್ಟುಗೊಟ್ಟರೆ ಸರಕಾರದವರು ಈ ಗೊತ್ತುವಳಿಯನ್ನು ವಿರೋಧಿಸಲಾರರು. ಏಕೆಂದರೆ ಈ ಮೊದಲು ಮುಂಬಯಿ ಮದ್ರಾಸಪ್ರಾಂತಿಕ ಶಾಸನ ಸಭೆಗಳಲ್ಲಿ ಈ ಆಶಯದ ಗೊತ್ತುವಳಿ ಸ್ವೀಕೃತವಾಗಿದೆ. ಕೇಂದ್ರ ಶಾಸನ ಸಭೆಯಲ್ಲಿಯೂ ಶ್ರೀ ಲಕ್ಷ್ಮಿಯವರು ತಂದಿದ್ದ ಭಾಷಾನ್ವಯ ಪ್ರಾಂತರಚನೆಯ ಗೊತ್ತುವಳಿ ಸ್ವೀಕೃತವಾಗಿದೆ. ಹೀಗಿರುವಾಗ ಸದ್ಯದ ಗೊತ್ತುವಳಿ ಮತ್ತೆ ಸ್ವೀಕೃತವಾಗುವದೆಂಬಲ್ಲಿ ಸಂದೇಹವಿಲ್ಲ. ಆದರೂ ಜನತೆ ಕೇಂದ್ರ ಶಾಸನಸಭಾಸದಸ್ಯರಿಗೆ ಸಂಪೂರ್ಣ ಬೆಂಬಲ ಕೊಡುವದವಶ್ಯವಾಗಿದೆ. ಸರಕಾರದವರೂ ಈ ವಿಷಯದಲ್ಲಿ ಅನಾಸ್ಥೆಯನ್ನು ವಹಿಸುವದು ಸರಿಯಾಗಲಾರದು. ಈಗಂತೂ ಕೇಂದ್ರ ಸರಕಾರದಲ್ಲಿ ಕಾಂಗ್ರೆಸ್ಸಿನ ಬಹುಮತವಿದೆ. ಕಾಂಗ್ರೆಸ್ಸು ಭಾಷಾನ್ವಯ ಪ್ರಾಂತರಚನೆಯ ತತ್ವಕ್ಕೆ ಬದ್ಧವಾಗಿದೆ. ಅಂದಬಳಿಕ ಈ ಪ್ರಶ್ನೆಯನ್ನು ಮೇಲೆ ಹೇಳಿದಂತೆ ಅನಾಸ್ಥೆಯಿಂದ ಅಲಕ್ಷಿಸದೆ ಸಕ್ರಿಯ ಬೆಂಬಲ ಕೊಟ್ಟು ಪ್ರೋತ್ಸಾಹಿಸಬೇಕು. ಗೊತ್ತುವಳಿ ಸ್ವೀಕೃತವಾದ ಬಳಿಕವೂ ಅದಕ್ಕನುಸಾರವಾಗಿ ಮುಂದಿನ ಕ್ರಮ ತೆಗೆದುಕೊಳ್ಳಬೇಕು. ಅಂದರೇನೇ ಅವರು ತಮ್ಮ ಕರ್ತವ್ಯವನ್ನು ಮಾಡಿದಂತಾಗುವದು. ಬಹುಸಂಖ್ಯಾಕ ಕನ್ನಡ ಆಂಧ್ರ ಮೊದಲಾದವರಿಗಾದ ಅನ್ಯಾಯದ ಪರಿಮಾರ್ಜನೆಯಾಗುವದು.

## ಅರಸರ ಹಾರೈಕೆ

ಜಾರ್ಜ ಬಾದಶಹರು ಪಾರ್ಲಮೆಂಟನ್ನು ಮುಂದರಿಸುವಾಗ ೬ ನೇ ತಾರೀಕು ಭಾಷಣ ಮಾಡುತ್ತ ಹಿಂದುಸ್ತಾನದ ರಾಜಕೀಯ ಪ್ರಗತಿಯ ಬಗ್ಗೆ ಸಂತೋಷ ಪ್ರದರ್ಶಿಸಿದರು. 'ಹಿಂದುಸ್ತಾನದ ಕಾರ್ಯಕಲಾಪಗಳಿಗೆ ನನ್ನ ಸರಕಾರ ಅತ್ಯಂತ ಮಹತ್ವ ಕೊಡುತಿದೆ. ಮೂವರು ಮಂತ್ರಿಗಳು ಹಿಂದುಸ್ತಾನಕ್ಕೆ ಹೋಗಿ ಘಟನಾ ಸಮಿತಿಯ ರಚನೆಯ ಬಗ್ಗೆ ಮತ್ತು ನಡುಗಾಲ ಸರಕಾರ ಸ್ಥಾಪನೆಯ ಬಗ್ಗೆ ಮಹತ್ವದ ಘೋಷಣೆ ಮಾಡಿರುವರು. ಅದರಂತೆ ನಡುಗಾಲ ಸರಕಾರ ಸ್ಥಾಪಿತವಾಗಿದೆ. ಬ್ರಿಟಿಶ್ ಹಿಂದುಸ್ತಾನದಲ್ಲಿ ಮಹತ್ವದ ಪಕ್ಷಗಳಿಂದ ರಚಿಸಲ್ಪಟ್ಟ ಈ ಸರಕಾರದ ನೇತೃತ್ವದಲ್ಲಿ ಘಟನಾ ಸಮಿತಿಯ ಮೂಲಕ ಹಿಂದುಸ್ತಾನ ಬೇಗನೆ ಸ್ವಾತಂತ್ರ್ಯವನ್ನು ಪಡೆಯಲಿ' ಎಂದು ಹಾರಯಿಸಿದ್ದಾರೆ. ಬ್ರಿಟಿಶ ಮಂತ್ರಿಗಳು ಮತ್ತು ಪಾರ್ಲಮೆಂಟಿನವರು ಈ ಸ್ವಾತಂತ್ರ್ಯವನ್ನು ಕೊಡುವ ಧೋರಣವನ್ನು ಎಂದಿನಿಂದಲೂ ಇಟ್ಟುಕೊಂಡಿದ್ದಾರೆಂದೂ ಅರಸರು ಹೇಳಿರುವರು. ಅರಸರು ಮಾಡಿದ ಈ ಭಾಷಣ ವಾಡಿಕೆಯದಾಗಿದ್ದರೂ ಸದ್ಯದ ಸಮಯದಲ್ಲಿ ಅತ್ಯಂತ ಮಹತ್ವದ್ದಾಗಿದೆ. ಬ್ರಿಟಿಶ ಸರಕಾರದವರು ಹಿಂದೀ ಸ್ವಾತಂತ್ರ್ಯ ಧೋರಣೆಯನ್ನು ಎಂದೋ ಇಟ್ಟುಕೊಂಡಿದ್ದರೂ ಅವರ ಸಾಮ್ರಾಜ್ಯತ್ವ ಧೋರಣ ಅಡ್ಡ ಬರುತಿದೆ. ಒಂದಿಲ್ಲೊಂದು ನೆವ ಮುಂದೆ ಮಾಡಿ ಹಿಂದೀ ಸ್ವಾತಂತ್ರ್ಯವನ್ನು ಮುಂದೊತ್ತುತ್ತ ಬಂದಿರುವರು. ಸಿಮುಲಾ ಪರಿಷತ್ತು, ಮಂತ್ರಿತ್ರಯದ ರಾಯಭಾರದ ಕಾಲಕ್ಕೆ ಬ್ರಿಟಿಶ ಸರಕಾರದವರು ವಹಿಸಿದ ಧೋರಣವೆಷ್ಟೊಂದು ಪ್ರತಿಗಾಮಿಯಾಗಿತ್ತೆಂಬುದನ್ನು ನೋಡಿದರೆ ಅರಸರ ಆಶ್ವಾಸನ ಕೇವಲ ಶಾಬ್ದಿಕ ಆಶ್ವಾಸನವೆಂದೇ ಹೇಳಬೇಕಾಗುವದು. ಭಾರತೀಯರು ಇಂಥ ಆಶ್ವಾಸನಗಳಿಂದ ಉಬ್ಬಿಕೂಡದೆ ಸ್ವಾತಂತ್ರ್ಯ ಸಂಪಾದನೆಗಾಗಿ ಅವಿರತ ಸಂಘಟಿತ ಪ್ರಯತ್ನ ಮಾಡಬೇಕಾಗಿದೆ. ಹಿಂದುಸ್ತಾನದಲ್ಲಿಯ ಪಕ್ಷಪಂಗಡಗಳಲ್ಲಿ ಐಕ್ಯವಾದರೆ ಬ್ರಿಟಿಶ್‌ರು ಎಷ್ಟೇ ಪ್ರತಿಗಾಮಿ ಧೋರಣ ವಹಿಸಿದರೂ ಹಿಂದುಸ್ತಾನದಲ್ಲಿ ಸ್ವಚ್ಛಂದ ಆಳಿಕೆಯನ್ನು ನಡೆಸಲಾರರು. ಇದನ್ನು ನೆನೆದು ಭಾರತೀಯರು ಐಕ್ಯದಿಂದ ಸ್ವಾತಂತ್ರ್ಯ ಸಂಗ್ರಾಮವನ್ನು ನಡೆಸಬೇಕೆಂದು ಆಗ್ರಹಪಡಿಸುತ್ತೇವೆ.

## ಮುಖಂಡರ ಮನವಿ

ದೇಶದಲ್ಲಿ ಹಬ್ಬಿದ ಜಾತೀಯ ದೊಂಬಿಗಳಿಂದ ನಾಗರಿಕರ ವಿತ್ತ ಜೀವಿತಗಳು ಸುರಕ್ಷಿತ ಉಳಿಯುವ ಪರಿಸ್ಥಿತಿಯಿಲ್ಲದಂತಾಗಿದೆ. ಈ ದೊಂಬಿ ದಿನದಿನಕ್ಕೆ ವ್ಯಾಪಿಸುತ್ತ ನಡೆದಿದೆ. [...]ಯಲ್ಲದೆ ಕಡಮೆಯಾಗಲೊಲ್ಲದು. ಇದನ್ನು ಕಂಡು ಎಂಥ ಜಾತ್ಯಂಧ ಭಾರತೀಯನೂ ವಿಷಾದ ಪಡದಿರಲಾರನು. ಅಂತೆಯೆ ಎಲ್ಲ ಪಕ್ಷಪಂಗಡಗಳ ಮುಖಂಡರೂ ಈ ದೊಂಬಿಗಳ ಬಗ್ಗೆ ತೀವ್ರ ಸಂತಾಪವನ್ನು ವ್ಯಕ್ತಪಡಿಸಿ ಸ್ಪಷ್ಟ ಶಬ್ದಗಳಿಂದ ಅವನ್ನು ನಿಷೇಧಿಸಿದ್ದಾರೆ. ದೇಶದ ಬೇರೆ ಬೇರೆ ಭಾಗಗಳಲ್ಲಿನ ಗಲಭೆಗಳ ಪರಿಸ್ಥಿತಿಯನ್ನು ಇದೇ ಸಂಚಿಕೆಯಲ್ಲಿ ಬೇರೆಕಡೆ ಪ್ರಸಿದ್ಧಿಸಿದ್ದೇವೆ. ಪೂರ್ವಬಂಗಾಲ ಮತ್ತು ಬಿಹಾರದ ಪರಿಸ್ಥಿತಿ ಹೆಚ್ಚು ಗಂಡಾಂತರದ್ದಾಗಿದೆ. ಪೂರ್ವಬಂಗಾಲದಲ್ಲಿ ಕಳೆದ ತಿಂಗಳ ೧೦ನೇ ತಾರೀಕು ಭಯಂಕರ ಸ್ವರೂಪದ ಕೊಲೆ ಸುಲಿಗೆ ಕೊಳ್ಳಿಗಳು ನಡೆದು ಸಾವಿರಗಟ್ಲೆ ಜನ ಮೃತ್ಯುಮುಖದಲ್ಲಿ ಬಿದ್ದುದರ ಪ್ರತಿಕ್ರಿಯೆ ಬಿಹಾರದ ಮೇಲೆ ಆಗಿ ಅಲ್ಲಿ ಭೀಷಣ ಹತ್ಯಾಕಾಂಡ ನಡೆಯಿತು. ನೌಖಾಲಿ ತಿಪ್ಪೇರಾ ಜಿಲ್ಹೆಗಳಲ್ಲಿ ಹಿಂದುಗಳು ಅಲ್ಪಸಂಖ್ಯಾಕರಾಗಿದ್ದಾರೆ. ಬಿಹಾರದ ಪಾಟಣಾ ಗಯಾ, ಮೋಂಘೀರ ಮೊದಲಾದ ಜಿಲ್ಹೆಗಳಲ್ಲಿ ಹಿಂದುಗಳು ಬಹುಸಂಖ್ಯಾಕರಾಗಿದ್ದಾರೆ. ಈ ಪರಿಸ್ಥಿತಿಯಲ್ಲಿ ಪೂರ್ವಬಂಗಾಲದಲ್ಲಿ ಮುಸಲ್ಮಾನರು ಪುಂಡಾಟಿಕೆ ನಡೆಸಿದ್ದರೆ ಬಿಹಾರದಲ್ಲಿ ಹಿಂದುಗಳು ಅದರ ಸೇಡು ತೀರಿಸಿಕೊಳ್ಳುವ ಅನುಚಿತ ಧೋರಣವನ್ನು ಸ್ವೀಕರಿಸಿದರು. ಇದು ಸರಿಯಾದ ಧೋರಣವಲ್ಲೆಂದು ಯಾರಾದರೂ ಹೇಳಬಹುದಾಗಿದೆ. ಪೂರ್ವಬಂಗಾಲದ ಪರಿಸ್ಥಿತಿಯನ್ನು ಪ್ರತ್ಯಕ್ಷ ನೋಡಿಕೊಂಡು ಹೋಗಲು ನಡುಗಾಲ ಸರಕಾರದ ನಾಲ್ವರು ಮಂತ್ರಿಗಳು ಸಂಚರಿಸಿದರು. ಅನಂತರ ಅವರು ಮನವಿಯೊಂದನ್ನು ಹೊರಡಿಸಿ ಪುಂಡಾಟಿಕೆಯನ್ನು ಕೂಡಲೆ ನಿಲ್ಲಿಸಿ ಶಾಂತತೆಯನ್ನುಂಟು ಮಾಡಿರೆಂದು ಕೇಳಿಕೊಂಡಿರುವರು. ಪಂಡಿತ ಜವಾಹರಲಾಲ ಮತ್ತು ನಿಶಿತಾರರು ಬಿಹಾರ ಪೀಡಿತ ಭಾಗದಲ್ಲಿಯೂ ಸಂಚರಿಸುತಿರುವರು. ಪೂರ್ವಬಂಗಾಲದಲ್ಲಿ ಇಷ್ಟೊಂದು ಹತ್ಯಾಕಾಂಡ ನಡೆದರೂ ಮುಸಲ್ಮಾನ ಮುಖಂಡರು ಅದಕ್ಕಷ್ಟೊಂದು ಮಹತ್ವಕೊಡದೆ ಕೇವಲ ಬಿಹಾರದಲ್ಲಿಯ ದೊಂಬಿಯ ಕಡೆಗೇ ಬೊಟ್ಟು ಮಾಡಿತೋರಿಸಿ ಅದಕ್ಕಾಗಿ ಹಿಂದುಗಳನ್ನು ಬಿಹಾರದ ಕಾಂಗ್ರೆಸ ಮಂತ್ರಿಮಂಡಳವನ್ನೂ ಟೀಕಿಸುವದು ಸರಿಯಾದ ಧೋರಣವಲ್ಲ. ಪುಂಡಾಟಿಕೆ ಎಲ್ಲಿ ನಡೆದರೂ ಯಾವದೇ ಜಾತಿಯವರು ನಡೆಸಿದರೂ ಅದನ್ನು ಖಂಡಿಸುವದು ಎಲ್ಲರ ಕರ್ತವ್ಯ. ಅದರೂ ಬಿಹಾರಿಗಳು ಅನುಸರಿಸಿದ ಸೇಡುತೀರಿಸಿಕೊಳ್ಳುವ ಪ್ರವೃತ್ತಿ ನ್ಯಾಯ್ಯವಲ್ಲೆಂಬುದು ಸ್ಪಷ್ಟವಿದೆ. ಅಂತೆಯೆ ಮಹಾತ್ಮರು ಬಿಹಾರಿಗಳಿಗಾಗಿ ಮನವಿ ಮಾಡಿಕೊಂಡಿದ್ದಾರೆ. ಪ್ರಾಯಶ್ಚಿತ್ತವೆಂದು ಅಲ್ಪಾಹಾರ ವ್ರತವನ್ನು ಕೈಕೊಂಡಿದ್ದಾರೆ. ಬಿಹಾರಿಗಳು ಸುಧಾರಿಸದಿದ್ದರೆ ಈ ಅಲ್ಪಾಹಾರದ ವ್ರತವೆ ಆಮರಣ ಉಪವಾಸದಲ್ಲಿ ಪರಿಣಮಿಸುವುದೆಂದು ಹೇಳಿದ್ದಾರೆ. ಮಹಾತ್ಮರ ಈ ಮನವಿಗೆ ಮನ್ನಣೆ ಕೊಟ್ಟು ಬಿಹಾರಿಗಳು ತಮ್ಮ ನಡತೆಯನ್ನು ತಿದ್ದಿಕೊಂಡು ಪ್ರಾಂತದಲ್ಲಿ ಸಂಪೂರ್ಣ ಶಾಂತತೆ ಪ್ರಸ್ಥಾಪಿತವಾಗುವಂತೆ ನೋಡಿಕೊಳ್ಳಬೇಕು. —ಮಹಾತ್ಮರು ಬಿಹಾರಿಗಳನ್ನುದ್ದೇಶಿಸಿ ಮಾತ್ರ ಈ ಮನವಿಯನ್ನು ಮಾಡಿಕೊಂಡದ್ದರಿಂದ ಪೂರ್ವಬಂಗಾಲದ ಪುಂಡರು ಮನಬಂದಂತೆ ವರ್ತಿಸಬೇಕೆಂದರ್ಥವಲ್ಲ. ಅವರಾದರೂ ತಮ್ಮ ಕರ್ತವ್ಯವನ್ನು ತಿಳಿದು ಹಿಂದೆ ಮಾಡಿದ ತಪ್ಪನ್ನು ತಿದ್ದಿಕೊಂಡು ಆ ಭಾಗದಲ್ಲಿ ಶಾಂತತೆಯನ್ನು ಪ್ರಸ್ಥಾಪಿಸಬೇಕು. ಮುಸ್ಲಿಂಲೀಗಿನ ಧುರೀಣರು ಇತ್ತ ಹೆಚ್ಚು ಗಮನಕೊಡುವದವಶ್ಯವಾಗಿದೆ ಎಲ್ಲರ ಪ್ರಯತ್ನದಿಂದ ದೇಶದಲ್ಲಿ ಎಂದಿನಂತೆ ಶಾಂತಿ ಪ್ರಸ್ಥಾಪಿಸಲೆಂದು ಹಾರೈಸುತ್ತೇವೆ.

## ಗ್ರಾಮೋದ್ಯೋಗ ಪರಿಷತ್ತು

ಹಿಂದುಸ್ತಾನದಲ್ಲಿ ಪರಕೀಯರು ಪ್ರಭುತ್ವ ನಡೆಸುತ್ತ ಬಂದದಿನಿಂದ ಇಲ್ಲಿನ ಉದ್ಯೋಗಧಂದೆಗಳು ಒಂದೊಂದಾಗಿ ಹಾಳಾಗುತ್ತ ನಡೆದುವೆಂಬುದು ಜನಜನಿತವಾಗಿದೆ. ಈ ಉದ್ಯೋಗಧಂದೆಗಳ ಪುನರುದ್ಧಾರವಾದರೆ ಮಾತ್ರ ದೇಶದ ಆರ್ಥಿಕ ಪ್ರಗತಿ ಸಾಧ್ಯವಾಗುವದು. ಅಂತೆಯೆ ಜನತಾ ಸರಕಾರ ಆಡಳಿತವನ್ನು ವಹಿಸಿಕೊಂಡ ಕೂಡಲೆ ಗ್ರಾಮೋದ್ಯೋಗಗಳ ಪುನರುಜ್ಜೀವನ ಕಾರ್ಯ ಕೈಕೊಂಡಿರುಹುದು. ಸರಕಾರದ ಗ್ರಾಮೋದ್ಯೋಗ ಕಾರ್ಯಕ್ರಮದ ಬಗ್ಗೆ ಮುಂಬಯಿ ಅರ್ಥಸಚಿವರಾದ ಶ್ರೀ ವೈಕುಂಠಲಾಲ ಮೆಹತಾರವರು ಪುಣೆಯಲ್ಲಿ ಕೂಡಿದ ಗ್ರಾಮೋದ್ಯೋಗ ಪರಿಷತ್ತಿನಲ್ಲಿ ವಿವರಿಸಿದರು. ಗ್ರಾಮೋದ್ಯೋಗ ಸಮಿತಿಯ ರಚನೆ, ಪ್ರಾಂತಿಕ ಔದ್ಯೋಗಿಕ ಸಹಕಾರೀ ಸಂಘದ ಸ್ಥಾಪನೆ, ಗ್ರಾಮೋದ್ಯೋಗಗಳನ್ನು ಔದ್ಯೋಗಿಕ ಖಾತೆಗೆ ವರ್ಗಾಯಿಸಿದ್ದು ಮೊದಲಾದವುಗಳಾಗಿದ್ದು ಇವು ಈಗಾಗಲೆ ಕಾರ್ಯರೂಪದಲ್ಲಿ ಬಂದಿವೆಂದು ಮುಂತಾಗಿ ಹೇಳಿದರು. ಸರಕಾರದವರು ಕೈಕೊಳ್ಳುವ ಯೋಜನೆಗಳು ಯಶಸ್ವಿಯಾಗಬೇಕಾದರೆ ಜನತೆಯ ಸಹಕಾರ—ಅದಕ್ಕು ಮಹತ್ವದ್ದೆಂದರೆ ಆಯಾ ಅಧಿಕಾರಿಗಳು ಆಸ್ಥೆಯಿಂದ ಕಾರ್ಯ ಮಾಡುವದು—ಅವಶ್ಯವಾಗಿದೆ. ಎಷ್ಟೋ ಸಂದರ್ಭಗಳಲ್ಲಿ ಅಧಿಕಾರಿಗಳ ಅನಾಸ್ಥೆಯಿಂದ ಹೊಸ ಯೋಜನೆಗಳು ಅಯಶಸ್ವಿಯಾಗುವುದುಂಟು. ಕಾಂಗ್ರೆಸ ಸರಕಾರದವರು ಕೈಕೊಂಡ ಮೂಲ ಶಿಕ್ಷಣ ಯೋಜನೆ ಅಷ್ಟೊಂದು ಪ್ರಗತಿ ಹೊಂದದಿರುವುದಕ್ಕೆ ಅಧಿಕಾರಿಗಳ ಅನಾಸ್ಥೆ ಕಾರಣವೆಂದು ಹೇಳಬಹುದಾಗಿದೆ. ಅಂತೆಯೆ ಅಧಿಕಾರಿಗಳು ಮತ್ತು ಸಾರ್ವಜನಿಕರು ಒಳ್ಳೆ ಆಸ್ಥೆಯಿಂದ ಗ್ರಾಮೋದ್ಯೋಗಗಳ ಪುನರುಜ್ಜೀವನಕ್ಕೆ ಕೈಗೊಟ್ಟರೆ ಹಿಂದುಸ್ತಾನ ಹಿಂದಿನಂತೆ ಉದ್ಯೋಗಧಂದೆಗಳ ಬೀಡಾಗುವುದರಲ್ಲಿ ಸಂದೇಹವಿಲ್ಲ. ಈ ಪರಿಷತ್ತಿನಲ್ಲಿ ಕೆಲ ಸೂಚನೆಗಳೂ ಸರಕಾರಕ್ಕೆ ಮಾಡಲ್ಪಟ್ಟವು. ಔದ್ಯೋಗಿಕ ಯೋಜನಾಮಂಡಳ ನಿಯಮಿಸಬೇಕು. ಯಾವ ಯಾವ ಜಿಲ್ಹೆಯಲ್ಲಿ ಯಾವ ಯಾವ ಉದ್ಯೋಗಗಳು ಯಶಸ್ವಿಯಾಗಬಲ್ಲವು, ಯಾವ ಉದ್ಯೋಗಗಳನ್ನು ಮೊದಲು ಕೈಕೊಳ್ಳಬೇಕು ಮುಂತಾದ್ದನ್ನು ಈ ಮಂಡಳದವರು ಗೊತ್ತುಪಡಿಸಿ ಸರಕಾರಕ್ಕೆ ಸೂಚನೆ ಕಳಿಸಬೇಕೆಂದು ಕೇಳಿಕೊಳ್ಳಲಾಗಿದೆ. ಕೈನೂಲು ಕೈಮಗ್ಗದ ಉದ್ಯೋಗಗಳನ್ನು ಸರಕಾರದವರೆ ಹಣ ಹಾಕಿ ನಡೆಸಬೇಕು. ಕೈಮಗ್ಗದ ಉದ್ಯೋಗಕ್ಕೆ ಸಂರಕ್ಷಣೆ ಕೊಡಬೇಕು. ಗಿರಣಿಗಳು ಇಂತಿಷ್ಟೆ ಬಟ್ಟೆಯನ್ನು ಹೊರಡಿಸಬೇಕೆಂದು ನಿರ್ಬಂಧಪಡಿಸಿ ಉಳಿದ ನೂಲನ್ನು ಕೈಮಗ್ಗಗಳಿಗೆ ಕೊಡುವಂತೆ ಯೋಜಿಸಬೇಕು. ಉಣ್ಣೆಯ ಉದ್ಯೋಗಕ್ಕೂ ಪ್ರೋತ್ಸಾಹನೆ ಕೊಡಬೇಕು ಎಂದು ಮುಂತಾಗಿ ಸೂಚಿಸಲಾಗಿದೆ. ಸರಕಾರದವರು ಈ ಸೂಚನೆಗಳಂತೆ ಸ್ಥಾಪಿಸಬಹುದಾದ ಸಮಿತಿಗಳ ಮೇಲೆ ಪ್ರಾಂತದ ಉದ್ಯೋಗಾಭಿವೃದ್ಧಿಯ ಹೊಣೆ ಎಷ್ಟಿದೆಂಬುದನ್ನು ಬೇರೆ ಹೇಳಬೇಕಿಲ್ಲ. ಸರಕಾರದ ಯೋಜನೆಗಳು ಬೇಗನೆ ಕಾರ್ಯರೂಪದಲ್ಲಿ ಬಂದು ಪ್ರಾಂತದ ಉದ್ಯೋಗಾಭಿವೃದ್ಧಿಯಾಗಲೆಂದು ಬಯಸುತ್ತೇವೆ.

## ಕಾರ್ಯಕರ್ತರಿಗೆ ಹಿತೋಕ್ತಿ

ಮುಂಬಯಿ ಅರ್ಥಸಚಿವರಾದ ಮಾನ್ಯ ವೈಕುಂಠಲಾಲರು ಹುಬ್ಬಳ್ಳಿಗೆ ಕಳೆದ ವಾರ ಬಂದಾಗ ಕಾಂಗ್ರೆಸ ಕಾರ್ಯಕರ್ತರನ್ನುದ್ದೇಶಿಸಿ ಕೆಲ ಹಿತೋಕ್ತಿಗಳನ್ನು ಹೇಳಿದರು. ಕಾಂಗ್ರೆಸ್ಸಿನ ಶಕ್ತಿ ಬೆಳೆಸುವಾಗ ಆ ಶಕ್ತಿಯ ದುರುಪಯೋಗವಾಗದಂತೆ ನೋಡಿಕೊಳ್ಳಬೇಕೆಂದು ಅವರು ಹೇಳಿದ್ದುದು ಮಹತ್ವದ್ದಾಗಿದೆ. ಬಲದ ಬೆಳವಣಿಗೆಯಿಂದ ಉನ್ಮತ್ತರಾಗಿ ಮನಬಂದಂತೆ ಕುಣಿಯುವುದು. ಎಂಥ ಬಲಿಷ್ಠ ಸಂಸ್ಥೆಗೂ ಒಗ್ಗದು. ತಾವು ಜನಸೇವಕರು ಅಧಿಕಾರಿಗಳಲ್ಲ ಎಂಬ ವೃತ್ತಿಯನ್ನು ಕಾಂಗ್ರೆಸ ಕಾರ್ಯಕರ್ತರು ಯಾವಾಗಲುಇವರು ಇಟ್ಟುಕೊಳ್ಳತಕ್ಕದ್ದು ಜಾತಿ ಮತಪಂಥಗಳನ್ನು ಎಣಿಸದೆ ಕಾರ್ಯಮಾಡಬೇಕು. ಅಂದರೇನೇ ಕಾಂಗ್ರೆಸ್ಸಿನ ಸಾತ್ವಿಕಶಕ್ತಿ ಸಂವರ್ಧನೆಯಾಗಿ ಜಗತ್ತಿನಲ್ಲಿ ಅದೊಂದು ಆದರ್ಶ ಸಂಸ್ಥೆಯಾಗಿ ಹಿಂದುಸ್ತಾನದ ಹಿಂದಿನ ಹಿರಿಮೆಯನ್ನು ಮತ್ತೆ ಪ್ರಸ್ಥಾಪಿಸಬಲ್ಲುದು. ಕಾಂಗ್ರೆಸ ಕಾರ್ಯಕರ್ತರು ವೈಕುಂಠಲಾಲರ ಉಪದೇಶವನ್ನು ಚೆನ್ನಾಗಿ ಅರಗಿಸಿಕೊಂಡು ಅದರಂತೆ ನಡೆಯಬೇಕೆಂದು ಸೂಚಿಸಬಯಸುತ್ತೇವೆ.

# ಬಂಗಾಲ–ಬಿಹಾರಗಳಲ್ಲಿನ ಭೀಷಣ ಪರಿಸ್ಥಿತಿ

## ಹತ್ಯಾಕಾಂಡವನ್ನು ನಿಲ್ಲಿಸಲು ಮುಖಂಡರ ಬಿನ್ನಹ

### ಬಿಹಾರ ದೊಂಬಿಗಾಗಿ · ಅತ್ಯಲ್ಪಾಹಾರದ ಪ್ರಾಯಶ್ಚಿತ್ತ ತೆಗೆದುಕೊಳ್ಳುವುದಾಗಿ ಮಹಾತ್ಮರ ನಿರ್ಧಾರ

ಕೃಪಲಾಣಿಯವರ ಪ್ರತ್ಯುತ್ತರ

ಕಾಂಗ್ರೆಸ್ಸಿನ ನಿಯೋಜಿತ ಅಧ್ಯಕ್ಷರಾದ ಆಚಾರ್ಯ ಕೃಪಲಾಣಿಯವರು ನೌಖಾಲಿ ತಿಪ್ಪೇರಾ ಜಿಲ್ಹೆಗಳಲ್ಲಿ ಸಂಚರಿಸಿ ಪರಿಸ್ಥಿತಿಯನ್ನು ಪ್ರತ್ಯಕ್ಷ ತಿಳಿದುಕೊಂಡು ಬಂದು ಮುಸ್ಲಿಂ ಪುಂಡರೆ ಅತ್ಯಾಚಾರಕ್ಕೆ ಕಾರಣರು. ಲೀಗ ಧುರೀಣರು ಮಾಡಿದ ಪ್ರಚಾರದ ದುಷ್ಪರಿಣಾಮವಿದು ಎಂದು ಮುಂತಾಗಿ ಸುದ್ದಿಗಾರರ ಸಭೆಯಲ್ಲಿ ಹೇಳಿದರು. ಈ ಸಂಬಂಧದಲ್ಲಿ ಬಂಗಾಲ ಪ್ರಾಂತಿಕ ಮುಸ್ಲಿಂ ಲೀಗಿನವರು ಗೊತ್ತುವಳಿಯೊಂದನ್ನು ಸ್ವೀಕರಿಸಿ ಆಚಾರ್ಯರ ಹೇಳಿಕೆಯನ್ನು ಖಂಡಿಸಿದ್ದಾರೆ. ಕಾಂಗ್ರೆಸ್ಸಿನ ಅಧ್ಯಕ್ಷ ಪದವನ್ನಲಂಕರಿಸಿದ ಆಚಾರ್ಯರು ಇಂದು ಹೊಣೆಗಾರಿಕೆಯನ್ನು ಮರೆತು ಈ ರೀತಿ ಹೇಳಿಕೆ ಕೊಟ್ಟಿದ್ದು ದುರ್ದೈವದ ಸಂಗತಿ; ಇಷ್ಟೇ ಅಲ್ಲ ಹೊಣೆಗೇಡಿತನವೂ ಆಗಿದೆ ಎಂದು ಈ ಗೊತ್ತುವಳಿಯಲ್ಲಿ ಟೀಕಿಸಲಾಗಿದೆ. ಈ ಗೊತ್ತುವಳಿಯನ್ನು ಖಂಡಿಸುತ್ತ ಆಚಾರ್ಯರು ಲೀಗಿಗೆ ಪ್ರತ್ಯುತ್ತರ ಕೊಟ್ಟಿದ್ದಾರೆ. ನನ್ನ ಹೊಣೆಗಾರಿಕೆಯ ಅರಿವು ನನಗಿದೆ. ಇಲ್ಲದಿದ್ದರೆ ನಾನು ಪೂರ್ವ ಬಂಗಾಲಕ್ಕೇ ಹೋಗುತ್ತಿರಲಿಲ್ಲ. ನನ್ನ ಸ್ಥಾನಮಾನಗಳನ್ನನುಲಕ್ಷಿಸಿಯೆ ನನ್ನ ಹೇಳಿಕೆಯನ್ನು ಕೊಟ್ಟಿದ್ದೇನೆ. ನಿಷ್ಪಕ್ಷಪಾತ ವಿಚಾರಣಾ ಮಂಡಳ ನಿಯಮಿಸಿದ್ದಾದರೆ ಸತ್ಯವು ತಾನೇ ಹೊರಬೀಳುವದು. ಒಂದು ವೇಳೆ ನನ್ನ ಹೇಳಿಕೆಗಳು ಸುಳ್ಳಿನ ಕಂತೆಗಳೆಂದು ವಿಚಾರಣಾ ಸಮಿತಿಗೆನಿಸಿದರೆ ನಾನು ಯೋಗ್ಯ ಪ್ರಾಯಶ್ಚಿತ್ತ ತೆಗೆದುಕೊಳ್ಳುವೆನೆಂದು ಮುಂತಾಗಿ ಹೇಳಿ ನಿಷ್ಪಕ್ಷಪಾತ ವಿಚಾರಣಾ ಸಮಿತಿ ಸ್ಥಾಪಿತವಾಗುವ ವರೆಗೆ ಇನ್ನು ಮುಂದೆ ಯಾವದೇ ಬಗೆಯ ಹೇಳಿಕೆಯನ್ನು ಈ ಸಂಬಂಧದಲ್ಲಿ ಹೊರಡಿಸುವದಿಲ್ಲೆಂದು ಹೇಳಿರುವರು.

ಮಂತ್ರಿ ಚತುಷ್ಟಯದ ಸಂಚಾರ

ನಡುಗಾಲ ಸರಕಾರದ ಮಂತ್ರಿಗಳಾದ ಪಂಡಿತ ಜವಾಹರಲಾಲ ನೆಹರು, ಸರದಾರ ವಲ್ಲಭಭಾಯಿ ಪಟೇಲಲಿಯಾಕತ ಅಲ್ಲೀಖಾನ ಮತ್ತು ಅಬ್ದುಲ್ ರಾಬ ನಿಶಿತಾರರು ನವಂಬರ ೨ ನೇ ತಾರೀಕು ದಿಲ್ಲಿಯಿಂದ ಸ್ಪೆಶಲ್ ವಿಮಾನದಲ್ಲಿ ಕಲ್ಕತ್ತೆಗೆ ಹೋದರು. ಮೌಲಾನಾ ಅಬುಲ್‌ಕಲಂ ಅಝಾದರು ಇದೇ ವಿಮಾನದಿಂದ ಅಲ್ಲಿಗೆ ಹೋದರು.

'ನನ್ನ ಹೃದಯದಲ್ಲಿ ಕಲಮಲವಾಗಿದ್ದರೂ ಕಳೆದ ಕೆಲವು ವಾರಗಳಲ್ಲಿ ಹಿಂದೆಂದೂ ತಾಳದಷ್ಟು ಮೌನವನ್ನು ನಾನು ತಾಳಿದ್ದೇನೆ. ಈ ಮೌನದ ಬಗ್ಗೆ ಯಾರಾದರೂ ಅಪಾರ್ಥ ಮಾಡಿಕೊಂಡರೆ ಅವರು ನನ್ನನ್ನರಿತಿಲ್ಲೆಂದು ಹೇಳಬೇಕಾಗುತ್ತದೆ. ಹಿಂದುಸ್ಥಾನದ ಕೆಲ ಭಾಗಗಳಲ್ಲಿ ವಿಶೇಷತಃ ಪೂರ್ವ ಬಂಗಾಲದಲ್ಲಿ ಸಂಭವಿಸಿದ ದುರ್ಘಟನೆಗಳು ಸತ್ತವರನ್ನು ಸಹ ಎಚ್ಚರಿಸುವಂತಹವಿವೆ. ನಾನೇನೂ ಸತ್ತಿಲ್ಲ. ಇನ್ನೂ ಪೂರ್ಣ ಜೀವಂತನಿದ್ದೇನೆ' ಎಂದು ಪಂಡಿತ ಜವಾಹರಲಾಲರು ವಿಮಾನದಿಂದ ಕೆಳಗಿಳಿದ ಕೂಡಲೆ ಹೇಳಿದರು.

ಮಂತ್ರಿ ಚತುಷ್ಟಯವನ್ನು ಸ್ವಾಗತಿಸಲಾಯಿತು. ಅವರು ತಮ್ಮ ತಮ್ಮ ಬಿಡಾರಗಳಿಗೆ ಹೋದರು. ಈ ಮೊದಲು ಅಲ್ಲಿಗೆ ಹೋಗಿ ಪೀಡಿತ ಪ್ರದೇಶಗಳನ್ನು ಸಂಚರಿಸಿ ಬಂದ ವೈಸರಾಯರೊಡನೆ ಮಂತ್ರಿ ಚತುಷ್ಟಯ ವಿಚಾರವಿನಿಮಯ ಮಾಡಿತು. ಇದಕ್ಕೂ ಪೂರ್ವದಲ್ಲಿ ಪಂಡಿತ ಜವಾಹರಲಾಲ ಮತ್ತು ಸರದಾರ ವಲ್ಲಭಭಾಯರು ಸೋದೆಪುರ ಆಶ್ರಮದಲ್ಲಿ ಮಹಾತ್ಮರನ್ನು ಕಂಡು ಬಂದರು. ಇದೇ ಸಮಯದಲ್ಲಿ ಬಂಗಾಲದ ಮುಖ್ಯ ಮಂತ್ರಿ ಸುಹ್ರವರ್ದಿ ಮತ್ತು ಇತರ ಮುಸ್ಲಿಂಲೀಗ ಧುರೀಣರು ಲಿಯಾಕತ ಅಲ್ಲಿಖಾನ ಮತ್ತು ಅಬ್ದುಲ್ ರಾಬ ನಿಶಿತಾರರನ್ನು ಕಂಡು ಮಾತುಕತೆಯಾಡಿದರು.

ಹಿಂಸಾಚಾರ ತಡೆಯಿರಿ

ನಡುಗಾಲ ಸರಕಾರದ ಈ ಮಂತ್ರಿಗಳು ಸಂಯುಕ್ತ ಪ್ರಕಟನೆಯೊಂದನ್ನು ಹೊರಡಿಸಿ ದೇಶದಲ್ಲಿ ವಿಶೇಷತಃ ಬಂಗಾಲದಲ್ಲಿ ನಡೆದಿರುವ ದುರ್ಘಟನೆಗಳ ಬಗ್ಗೆ ವಿಷಾದ ವ್ಯಕ್ತಪಡಿಸಿರುವರಲ್ಲದೆ ಈ ದುರ್ಘಟನೆಗಳನ್ನು ತಡೆಯಲು ಎಲ್ಲರೂ ಪ್ರಯತ್ನಿಸಬೇಕೆಂದು ಪ್ರತಿಪಾದಿಸಿರುವರು. ಸದ್ಯದ ಪರಿಸ್ಥಿತಿ ಬಹಳ ಗಂಭೀರವಾಗಿರುವುದರಿಂದ ವಾದಗ್ರಸ್ತ ವಿಷಯಗಳನ್ನೆತ್ತದೆ ಇಂಥ ಪರಿಸ್ಥಿತಿಯನ್ನು ಸುಧಾರಿಸುವದು ಮತ್ತು ಅದರ ಮೂಲ ಕಾರಣಗಳನ್ನು ನಿರ್ಮೂಲ ಮಾಡುವದು ಎಲ್ಲ ನಾಗರಿಕರ ಕರ್ತವ್ಯವಾಗಿರುವಂತೆ ನಮ್ಮೆಲ್ಲರ ಕರ್ತವ್ಯವೂ ಆಗಿದೆ. ಈ ವಿಷಯದಲ್ಲಿ ನಾವು ಶಕ್ತಿಮೀರಿ ಪ್ರಯತ್ನಿಸುವೆವು.

ಇತ್ತೀಚಿಗೆ ನಡೆದ ಘಟನೆಗಳು ಹಿಂದುಸ್ಥಾನಕ್ಕೆ ಅವಮರ್ಯಾದೆ ತರುವಂತಹವಾಗಿವೆ. ಜಗತ್ತಿನ ಎದುರಿಗೆ ನಾವು ನಾಚಿಕೆಯಿಂದ ತಲೆವಾಗಿಸುವಂತಿವೆ. ನಮ್ಮ ಮತಭೇದಗಳೇನೇ ಇರಲಿ, ಯಾರೂ ನಮ್ಮ ಜನರನ್ನು ಅಧೋಗತಿಗೆ ಎಳೆಯುವ ಯಾವದೇ ಪಾಶವೀ ಕೃತ್ಯಗಳನ್ನು ಸಹಿಸಕೂಡದು. ಈ ನಿಂದ್ಯರೀತಿ ಎಷ್ಟೂ ಪ್ರಯೋಜಕವಿಲ್ಲ. ಇದರಿಂದ ನಾವು ಸ್ವಾತಂತ್ರ್ಯ ಸೌಧದ ಕಟ್ಟಡವನ್ನು ಕಟ್ಟಲಾರೆವು. ನಮ್ಮ ನೆರೆಹೊರೆಯ ನಾಗರಿಕರ ಮೇಲೆ ಹಿಂಸೆ ಮಾಡುವದರಿಂದ ಪ್ರತಿ ಹಿಂಸೆಯಾಗಿ ಎಲ್ಲೆಡೆಯೂ ಹಿಂಸೆ ಬೆಳೆಯುವದು. ಇದರಿಂದ ನಾಗರಿಕ ಜೀವನವೇ ಹಾಳಾಗಿ ಹೋಗುವದು. ಮಾನವತೆಯೇ ಅಧೋಗತಿಗಿಳಿಯುವದು. ಆದುದರಿಂದ ಎಲ್ಲರೂ ಹಿಂಸಾಪ್ರವೃತ್ತಿಯನ್ನು ಬಿಟ್ಟು ಶಾಂತಿಮಾರ್ಗವನ್ನು ಹಿಡಿಯಬೇಕೆಂದು ನಾವು ಅಂತಃಕರಣಪೂರ್ವಕವಾಗಿ ಬಿನ್ನವಿಸುತ್ತೇವೆ. ಬಿಹಾರದಿಂದ ಬಂದ ಸುದ್ದಿಯು ಮನಸ್ಸನ್ನು ವ್ಯಾಕುಲಗೊಳಿಸುವಂತೆ ಇದೆ. ಆದುದರಿಂದ ನಾವು ಅಲ್ಲಿಯ ಪರಿಸ್ಥಿತಿಯನ್ನು ಕಣ್ಣಾರೆ ಕಾಣಲು ಪಾಟಣಾಕ್ಕೆ ಹೋಗುವೆವು ಎಂದು ಮುಂತಾಗಿ ಬರೆದಿರುವರು. ಮಂತ್ರಿಗಳು ಪೀಡಿತ ಪ್ರದೇಶವನ್ನೆಲ್ಲ ಸಂಚರಿಸಿ ಬಂದರು.

ನೌಖಾಲಿ ಮೊದಲಾದ ಕಡೆಯಲ್ಲಿಯ ಅತ್ಯಾಚಾರವನ್ನು ನಿಷೇಧಿಸಲು ಕಲಕತ್ತೆಯಲ್ಲಿ ೪ ರಿಂದ ೧೦ ದಿನ ಸಾರ್ವತ್ರಿಕ ಹರತಾಳ ಹೂಡಿ ವ್ಯಾಪಾರ ಉದ್ದಿಮೆಗಳನ್ನೆಲ್ಲ ನಿಲ್ಲಿಸಿಬಿಡಬೇಕೆಂದು ಬಾಬೂ ಶರಚ್ಚಂದ್ರ ಬೋಸರ ಬಿನ್ನಹದ ಮೇರೆಗೆ ಕಲಕತ್ತೆಯ ವ್ಯಾಪಾರಸ್ಥರು ನಿರ್ಧರಿಸಿದ್ದರು. ಆದರೆ ಹೀಗೆ ಹರತಾಳ ಮಾಡುವುದರಿಂದ ತಾವು ಶಾಂತಿ ದಿಸೆಯಲ್ಲಿ ನಡೆಸಿದ ಪ್ರಯತ್ನಗಳಿಗೆ ಅಡ್ಡಿ ಬರುತಿದೆಂದು ಪಂಡಿತ ಜವಾಹರಲಾಲರು ತಿಳಿಸಿದ್ದರಿಂದ ಶರಚ್ಚಂದ್ರರು ಪ್ರಕಟನೆ ಹೊರಡಿಸಿ ಸಾರ್ವತ್ರಿಕ ಹರತಾಳವನ್ನು ನಿಲ್ಲಿಸಿದರು.

ಬಂಗಾಲ ಗವರ್ನರರ ವರದಿ

ಈ ಅತ್ಯಾಚಾರಗಳ ಸಂಬಂಧದಲ್ಲಿ ಬಂಗಾಲದ ಗವರ್ನರರು ಕಾಮನ್ಸ ಸಭೆಗೆ ಕಳಿಸಿದ ಮತ್ತೊಂದು ವರದಿಯಲ್ಲಿ ಹೀಗೆ ಅಭಿಪ್ರಾಯಪಟ್ಟಿದ್ದಾರೆ. ಮೈಮನಸಿಂಗ ಜಿಲ್ಹೆಯಲ್ಲಿ ಇತ್ತೀಚೆ ಜಾತೀಯ ಗಲಭೆ ಸಂಭವಿಸಿ ಇಬ್ಬರು ಸತ್ತರು. ಮೂರು ಮನೆಗಳು ಭಸ್ಮವಾದವು. ಐದು ಮನೆಗಳನ್ನು ಲೂಟಿ ಮಾಡಲಾಯಿತು. ಈಗ ಪರಿಸ್ಥಿತಿ ಹಿಡಿತದಲ್ಲಿದೆ. ಬಂಗಾಲ ಶಾಸನ ಸಭೆಯ ಹಿಂದಿನ ಸದಸ್ಯ ಗುಲಾಮ ಸರದಾರರನ್ನು ಸೆರೆ ಹಿಡಿಯಲಾಗಿದೆ. ೨೫ ಪುಂಡರನ್ನು ಬಂಧಿಸಲಾಗಿದೆ. ೩೧ ಜನರು ಪೋಲೀಸ ಹಾಗು ಸೈನಿಕರಿಂದ ಕೊಲ್ಲಲ್ಪಟ್ಟು ೩೯ ಜನ ಗಾಯಗೊಂಡಿರುವರು. ತಿಪ್ಪೇರಾ ಜಿಲ್ಹೆಯ ೧೬೦ ಚದುರು ಮೈಲು ಹಾಗೂ ನೌಖಾಲಿ ಜಿಲ್ಹೆಯ ೩೦೦ ಚದರು ಮೈಲು ಪ್ರದೇಶಕ್ಕೆ ಮಾತ್ರ ಗಲಭೆ ಹಬ್ಬಿದೆ. ಈ ಗಲಭೆಗಳ ವಿವರಗಳ ಪೂರ್ಣ ವಿವರಗಳಿನ್ನೂ ಬಂದಿಲ್ಲ. ಸಾವಿರಾರು ಜನ ಮನೆಮಾರುಗಳನ್ನು ಬಿಟ್ಟು ಹೋಗಿರುವರು. ಇದ್ದವರು ವಿವರಗಳನ್ನು ತಿಳಿಸಲು ಹೆದರುತಿರುವರು. ಪೋಲೀಸ ಹಾಗು ಸೈನ್ಯದ ಪ್ರಯತ್ನದಿಂದ ಅಲ್ಲಿ ಶಾಂತಿ ಪ್ರಸ್ಥಾಪಿತವಾಗಿ ಜನರ ಭೀತಿ ಮಾಯವಾಗುವ ವರೆಗೆ ಈ ವಿವರಗಳು ಗೊತ್ತಾಗುವದಿಲ್ಲ. ಒಟ್ಟು ೪೦ ಹಳ್ಳಿಗಳಿಗೆ ಈ ಗಲಭೆಯಿಂದ ಧಕ್ಕೆತಟ್ಟಿದೆ. ಈ ಸಂಖ್ಯೆ ಇನ್ನೂ ಹೆಚ್ಚಾಗಿರಬಹುದು. ನೌಖಾಲಿ ಜಿಲ್ಹೆಯಲ್ಲಿ ೨೫೦–೩೦೦ ಮನೆಗಳು ಭಸ್ಮವಾಗಿರುವವೆಂದು ಅಂದಾಜು. ತಿಪ್ಪೆರಾ ಜಿಲ್ಹೆಯಲ್ಲಿ ೩೫೦ ಮನೆಗಳು ಭಸ್ಮವಾಗಿರಬಹುದು. ಪೂರ್ಣ ಅಂಕಿಗಳು ತಿಳಿದಿಲ್ಲ. ಜನರು ಹೌಹಾರಿ ಮನೆ ಬಿಟ್ಟು ಹೋದುದರಿಂದ ಪುಂಡರಿಗೆ ಕೊಳ್ಳಿ ಸುಲಿಗೆಗೆ ಅವಕಾಶ ಹೆಚ್ಚಾಗಿ ದೊರೆತಿದೆ. ಸಾವು ನೋವುಗಳ ಸಂಖ್ಯೆ ಪೂರ್ಣ ತಿಳಿದಿಲ್ಲವಾದರೂ ಮೊದಲು ತಿಳಿಸಿದಂತೆ ಇದು ಮೂರಂಕಿಯನ್ನು ಮೀರಿಲ್ಲೆಂದು ಹೇಳಬಹುದು. ಅಕ್ಟೋಬರ ೨೨ರ ವರೆಗೆ ನೌಖಾಲಿ ಜಿಲ್ಹೆಯಲ್ಲಿ ೧೦೦ ಕ್ಕಿಂತ ಹೆಚ್ಚು ಕೊಲೆಗಳಾಗಿಲ್ಲ. ತಿಪ್ಪೇರಾ ಜಿಲ್ಹೆಯ ಸಂಖ್ಯೆ ಇದಕ್ಕು ಕಡಮೆ—ನೌಖಾಲಿ ಜಿಲ್ಹೆಯಲ್ಲಿ ಒಬ್ಬ ಹಿಂದುವಿನ ಮನೆಯಲ್ಲಿ ೪೦೦ ಜನ ಸತ್ತರೆಂದು ಸುದ್ದಿ ಹಬ್ಬಿತ್ತು. ಆದರೆ ಕೇವಲ ೨೧ ಜನ ಸತ್ತರೆಂದು ವಿಚಾರಣೆಯ ಅಂತ್ಯದಲ್ಲಿ ಗೊತ್ತಾಯಿತು. ಸ್ತ್ರೀಯರ ಅಪಹರಣದ ಅಂಕಿಗಳೂ ಪೂರ್ಣ ಗೊತ್ತಾಗಿಲ್ಲ. ನೌಖಾಲಿ ತಿಪ್ಪೇರಾ ಜಿಲ್ಹೆಗಳಲ್ಲಿ ಸಾಮೂಹಿಕವಾಗಿ ಒತ್ತಾಯದಿಂದ ಜನರನ್ನು ಮತಾಂತರಗೊಳಿಸಲಾಯಿತೆಂಬುದು ನಿಜ. ಆದರೂ ಪೂರ್ಣ ಅಂಕಿ ಸಂಖ್ಯೆಗಳು ದೊರೆಯುವದಿಲ್ಲ. ನಿರಾಶ್ರಿತರ ಸಂಖ್ಯೆ ೫೦ ಸಾವಿರಕ್ಕೆ ಮಿಕ್ಕಿದೆ. ಪರಿಹಾರಕಾರ್ಯ ನಡೆದಿದೆ.

ಇತ್ತೀಚಿನ ಪೂರ್ವಬಂಗಾಲದಲ್ಲಿಯ ಜಾತೀಯ ಗಲಭೆಗಳನ್ನು ಹಿಂದುಸ್ಥಾನದ ಬೇರೆಬೇರೆ ಗಣಗಳಲ್ಲಿಯ ಜಾತೀಯ ಗಲಭೆಗಳಲ್ಲಿ ಜುಲೈ ೧ ರಿಂದ ಅಕ್ಟೋಬರ ೩೦ ರ ವರೆಗೆ ೫೦೦೦ ಜನರು ಸತ್ತಿರುವರೆಂದೂ ೧೩ ಸಾವಿರ ಜನ ಗಾಯಗೊಂಡಿರುವರೆಂದು ಉಪಭಾರತಮಂತ್ರಿಗಳು ಕಾಮನ್ಸದಲ್ಲಿ ಹೇಳಿದರು. ಇದರಲ್ಲಿ ಕಲಕತ್ತೆಯಲ್ಲಿಯ ಅಂಕಿಗಳೆ ಹೆಚ್ಚಿರುವವು. ಅಕ್ಟೋಬರ ೩೦ ರಿಂದ ಬಿಹಾರದಲ್ಲಿ ದಂಗೆ ಸಂಭವಿಸಿದ್ದು ೨೦೪ ಜನ ಸತ್ತಿರುವರು.

ಬಿಹಾರದಲ್ಲಿ

ಮಂತ್ರಿಗಳು ಪೂರ್ವ ಬಂಗಾಲದಿಂದ ಬಿಹಾರ ದೊಂಬಿಯ ಪ್ರದೇಶಕ್ಕೆ ಹೋಗಿ ಅಲ್ಲಿನ ಪರಿಸ್ಥಿತಿಯನ್ನು ಪ್ರತ್ಯಕ್ಷ ತಿಳಿದುಕೊಂಡು ಬಂದರು. ಪಂಡಿತ ಜವಾಹರಲಾಲರು ತಾರೆಗ್ನದಲ್ಲಿ ಕೂಡಿದ ಸಭೆಯಲ್ಲಿ ಮಾತಾಡುತ್ತ 'ನೀವು ಮುಸ್ಲಿಂರನ್ನು ಕೊಲ್ಲಬೇಕಾದರೆ ಮೊದಲು ನನ್ನನ್ನು ಕೊಲ್ಲಿರಿ; ನನ್ನ ಹೆಣವನ್ನು ತುಳಿದು ಹೋಗಿ ಬೇಕಾದ್ದನ್ನು ಮಾಡಿರಿ' ಎಂದ್ಹೇಳಿದರು. ಬಿಹಾರದಲ್ಲಿಯ ಅನರ್ಥದ ಬಗ್ಗೆ ಮುಸ್ಲಿಂಲೀಗ ಪತ್ರಿಕೆಗಳು ಪ್ರಸಿದ್ಧಿಸಿದ ಅಂಕಿಗಳು ನಿಜವಿರುವದಿಲ್ಲೆಂದೂ ಅವರು ಹೇಳಿದರು. ಬ್ಯಾ. ಜಿನ್ನಾರವರು ಪ್ರಕಟನೆಯೊಂದನ್ನು ಹೊರಡಿಸಿ ಬಿಹಾರ ದೊಂಬಿಯನ್ನು ನಿಷೇಧಿಸಿ ತಮ್ಮ ಲಕ್ಷ್ಯವೆಲ್ಲ ಆ ಕಡೆಗೆ ಇರುವದೆಂದು ಹೇಳಿರುವರು.

ಮಹಾತ್ಮರ ಅತ್ಯಲ್ಪಾಹಾರದ ಘೋಷಣೆ

ಈ ಅತ್ಯಾಚಾರದ ಸುದ್ದಿಯಿಂದ ಮಹಾತ್ಮರು ಅತ್ಯಂತ ವ್ಯಾಕುಲರಾಗಿ ಪೀಡಿತ ಪ್ರದೇಶಗಳಿಗೆ ಹೋಗಿರುವರು. ಅವರು ಈ ಮೊದಲೆ ಕಲಕತ್ತೆಗೆ ಹೋಗಿದ್ದರು. ಬಕರೀದ ಮುಗಿವ ವರೆಗೆ ಕಲಕತ್ತೆಯಲ್ಲಿಯೇ ಇರಲು ಮುಖ್ಯ ಮಂತ್ರಿ ಸುಹ್ರವರ್ದಿಯವರು ಆಗ್ರಹಪಡಿಸಿದ್ದರಿಂದ ಅವರು ಕಲಕತ್ತೆಯಲ್ಲಿ ಉಳಿದು ೬ ನೇ ತಾರೀಕು ಮುಂಜಾನೆ ಸ್ಪೆಶಲ್ ಉಗಿಬಂಡಿಯಿಂದ ನೌಖಾಲಿಗೆ ಹೋದರು. ಬಿಹಾರದಲ್ಲಿಯ ಭೀಷಣ ಪರಿಸ್ಥಿತಿಯಿಂದಲೂ ಮಹಾತ್ಮರು ಬಹಳ ನೊಂದಿಕೊಂಡಿದ್ದಾರೆ. ಅವರು ಕಲಕತ್ತೆಗೆ ಬಂದಂದಿನಿಂದ ಆರೋಗ್ಯ ದೃಷ್ಟಿಯಿಂದ ಅತ್ಯಲ್ಪ ಆಹಾರ ತೆಗೆದುಕೊಳ್ಳುತಿದ್ದು ಈಗ ಬಿಹಾರ ಅತ್ಯಾಚಾರಗಳ ಪ್ರಾಯಶ್ಚಿತ್ತವೆಂದು ಅದನ್ನು ವ್ರತವನ್ನಾಗಿ ಮುಂದುವರಿಸಿದ್ದಾರೆ. ಈ ಸಂಗತಿಯನ್ನು ಅವರು ಬಿಹಾರಿಗಳನ್ನುದ್ದೇಶಿಸಿ ಬರೆದ ಕಾಗದದಲ್ಲಿ ಕಾಣಿಸಿದ್ದಾರೆ. ತಪ್ಪಿತಸ್ಥ ಬಿಹಾರಿಗಳು ಸುಧಾರಿಸದಿದ್ದರೆ ಈ ವ್ರತವು ಆಮರಣ ಉಪವಾಸದಲ್ಲಿ ಪರಿಣಮಿಸುವದೆಂದು ಅವರು ಬರೆದಿದ್ದಾರೆ.

ಬಿಹಾರಿಗಳ ಪುಂಡತನವನ್ನಡಗಿಸುವದಕ್ಕಾಗಿ ಪಂಡಿತ ಜವಾಹರಲಾಲರು ವಿಮಾನಗಳಿಂದ ಬಾಂಬುಗಳ ಸುರಿಮಳೆ ಮಾಡುವದಾಗಿ ಹೆದರಿಸಿದ್ದಾರೆ. ಇದು ಬ್ರಿಟಿಶರ ದಾರಿ. ಜನತೆಯ ಪ್ರತಿನಿಧಿಯಾದ ಕಾಂಗ್ರೆಸ್ಸು ಜನತೆಯನ್ನೆ ಹತ್ತಿಕ್ಕಲು ಈ ಪರಕೀಯ ಪದ್ಧತಿಯನ್ನನುಸರಿಸಬಾರದು ಎಂದು ಮುಂತಾಗಿ ಗಾಂಧೀಜಿ ಪ್ರಾರ್ಥನಾ ಸಭೆಯಲ್ಲಿ ಹೇಳಿದರು.

ಡಾ. ಶ್ಯಾಮಪ್ರಸಾದ ಮುಖರ್ಜಿಯವರು ಪ್ರಕಟನೆಯೊಂದನ್ನು ಹೊರಡಿಸಿ ಬಂಗಾಲದ ಪರಿಸ್ಥಿತಿ ತೀರ ಗಂಭೀರವಾದಾಗ ಹಿಂದುಗಳಿಗೆ ಸಹಾಯ ಮಾಡಲೆಂದು ಮಹಾತ್ಮರು ಇಲ್ಲಿಗೆ ಬಂದರು. ಪರಿಸ್ಥಿತಿಯನ್ನು ಇನ್ನಷ್ಟು ಹದಗೆಡಿಸುವ ಅಧಿಕಾರ ಅವರಿಗಿಲ್ಲ. ಈ ಸೂಕ್ಷ್ಮ ಪರಿಸ್ಥಿಯಲ್ಲಿ ಅವರು ಕೈಕೊಳ್ಳಬೇಕೆಂದಿರುವ ಅವರಣ ಉಪವಾಸದಿಂದ ಹಿಂದುಗಳಿಗೆ ಅಪಾಯ ಮಾಡಿದಂತಾಗುವದು. ಭಾರತದ ೩೦ ಕೋಟಿ ಹಿಂದುಗಳು ಇಸ್ಲಾಮ ಧರ್ಮ ಸ್ವೀಕರಿಸಿ ಜಾತೀಯ ಸಮಸ್ಯೆ ಬಿಡಿಸಬೇಕೆಂದು ಜಿನ್ನಾರ ಅನು

—೧೩ನೇ ಪುಟಕ್ಕೆ

## ಮಂಗಳೂರಲ್ಲಿ ವಿದ್ಯಾಮಂತ್ರಿಗಳು

ಮದ್ರಾಸ ಸರಕಾರದ ಶಿಕ್ಷಣ ಮಂತ್ರಿಗಳಾದ ಶ್ರೀ ಅವಿನಾಶಲಿಂಗಂ ಚೆಟ್ಟಿಯಾರರು ದಿನಾಂಕ ೩೧ರ ಸಂಜೆ ಮಂಗಳೂರಿಗೆಆಗಮಿಸಲು ಸ್ಥಳಿಕ ಅಧಿಕಾರಿಗಳೂ ಕಾರ್ಯಕರ್ತರೂ ಸ್ವಾಗತವಿತ್ತು ಬರಮಾಡಿಕೊಂಡರು.

ಮರುದಿನ ಬೆಳಿಗ್ಗೆ ಸ್ಥಳಿಕ ವಿದ್ಯಾಸಂಸ್ಥೆಯ ಅಧಿಕಾರಿಗಳು ಹಾಗು ವಿದ್ಯಾರ್ಥಿ ಕಾಂಗ್ರೆಸ್ಸಿನವರು ಮಂತ್ರಿಗಳನ್ನು ಕಂಡರು. ವಿದ್ಯಾರ್ಥಿ ಕಾಂಗ್ರೆಸಿನವರು ಮನವಿಯೊಂದನ್ನು ಮಂತ್ರಿಗಳಿಗೆ ಅರ್ಪಿಸಿದರು. ಅದರಲ್ಲ ವಿದ್ಯಾರ್ಥಿಗಳಿಗೆ ಸೈನಿಕ ಶಿಕ್ಷಣ ಕೊಡಬೇಕೆಂದೂ ಸ್ಥಳಿಕ ಸರಕಾರಿ ಕಾಲೇಜನ್ನು ಮೊದಲನೆ ದರ್ಜೆಯ ಕಾಲೇಜನ್ನಾಗಿ ಮಾಡಬೇಕೆಂದೂ ವಿದ್ಯಾರ್ಥಿಗಳು ಮಂತ್ರಿಗಳಯೋಜನೆಯಲ್ಲಿ ಸಹಕರಿಸುವರೆಂದೂ ಕೇಳಿಕೊಂಡಿದ್ದರು. ಮಂತ್ರಿಗಳು ಈಗಾಗಲೆ ಮೊದಲನೆಯ ದರ್ಜೆ ಕಾಲೇಜ ಮಾಡುವದು ಸಾಧ್ಯವಿಲ್ಲೆಂದೂ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಶಿಕ್ಷಾ ಪದ್ಧತಿ ಜಾರಿಯಲ್ಲಿ ತರುವ ಆಲೋಚನೆಯಿದೆಂದೂ ತಿಳಿಸಿದರು.

ಬಳಿಕ ಉಪಾಧ್ಯಾಯರ ಪರಿಷತ್ತು ಗಣಪತಿ ಹೈಸ್ಕೂಲಿನಲ್ಲಿ ಶ್ರೀ ಅವಿನಾಶಲಿಂಗಂರವರ ಅಧ್ಯಕ್ಷತೆಯಲ್ಲಿ ಸಾಗಿತು. ಮಕ್ಕಳಿಗೆ ಮೊದಲಿನ ೫ ವರ್ಷ ಪ್ರಾದೇಶಿಕ ಭಾಷೆ ಕಲಿಸಿ ಬಳಿಕಹಿಂದೀ ಕಲಿಸಬೇಕೆಂದು ಸೂಚಿಸಿದ್ದಕ್ಕೆ ಮಂತ್ರಿಗಳು ಉತ್ತರಕೊಡುತ್ತ ಮಕ್ಕಳಿಗೆ ಹೆಚ್ಚು ಭಾಷೆಗಳನ್ನು ಕಲಿಸಲು ಒತ್ತಾಯಪಡಿಸಿದರೆ ಬಹಳ ಕಷ್ಟವಾಗುವದೆಂದು ಹೇಳಿದರು.

ಬಳಿಕ ಉಪಾಧ್ಯಾಯರ ಪ್ರಶ್ನೆಗಳಿಗೆ ಉತ್ತರ ಕೊಡುತ್ತ ಉಪಾಧ್ಯಾಯರ ಸಂಬಳ ಹೆಚ್ಚಿಸುವ ವಿಷಯದಲ್ಲಿ ತಮಗೆ ಸಹಾನುಭೂತಿಯಿದೆಂದು ಹೇಳಿ ಉಪಾಧ್ಯಾಯರಿಗಾಗುವ ಅನ್ಯಾಯಗಳನ್ನು ದೂರ ಮಾಡುವದಕ್ಕಾಗಿ ಯತ್ನಿಸುವುದೆಂದೂ ಶಿಕ್ಷಕರು ಮಕ್ಕಳ ಹಿತವನ್ನು ಪ್ರಧಾನವಾಗಿಟ್ಟುಕೊಂಡು ಸಾಗಬೇಕೆಂದೂ ಹೇಳಿದರು.

---

# ಅಂತರ್‌ರಾಷ್ಟ್ರೀಯ

## ಯುಕ್ತರಾಷ್ಟ್ರ ಸಭೆ

ನ್ಯೂಯಾರ್ಕಿನಲ್ಲಿ ಕೂಡಿದ ಯುಕ್ತರಾಷ್ಟ್ರ ಸಭೆಯಲ್ಲಿ ಮುಂದಿನ ಎರಡು ತಿಂಗಳುಗಳ ವಿಷಯಪಟ್ಟಿ ನಿರ್ಣಯಿಸುವಾಗ ಹಿಂದುಸ್ಥಾನ ... ಆಫ್ರಿಕೆಯ ವಿಷಯದ ಬಗ್ಗೆ ಕಿಡಿ ... ಹಾರಬಹುದೆಂದು ಅನೇಕರು ಯೋಚಿಸಿದ್ದರು. ಆದರೆ ಜನರಲ್ ಸ್ಮಟ್ಸರು ಹಿಂದುಸ್ಥಾನದ ವಿಷಯವನ್ನು ವಿರೋಧಿಸಲಿಲ್ಲಾದ್ದರಿಂದ ಯಾವದೇ ಬಗೆಯ ತಿಕ್ಕಾಟವೇಳಲಿಲ್ಲ. ಜನರಲ್ ಸ್ಮಟ್ಸರು ವಿಜಯಲಕ್ಷ್ಮಿ ಪಂಡಿತ ಇವರಿಗೆ ಉತ್ತರರೂಪವಾಗಿ ದೀರ್ಘ ಭಾಷಣವನ್ನು ಸಿದ್ಧಗೊಳಿಸಿ ಅದರ ಪ್ರತಿಗಳನ್ನು ಪ್ರತಿನಿಧಿಗಳಿಗೂ ಪತ್ರಿಕೋದ್ಯೋಗಿಗಳಿಗೂ ಹಂಚಿದ್ದರು. ದಕ್ಷಿಣ ಆಫ್ರಿಕೆಯ ಹಿಂದೀಯರ ವಿಷಯ ಅಂತರಿಕ ಸಮಸ್ಯೆಯೆಂದು ಅವರು ವಾದಿಸಿದ್ದರು. ವಿಜಯ ಲಕ್ಷ್ಮೀಯವರೂ ಜನರಲ್ ಸ್ಮಟ್ಸರಿಗೆ ಮಾರುತ್ತರ ಕೊಡಲು ಸಿದ್ಧರಾಗಿ ಬಂದಿದ್ದರು. ತಮ್ಮದೊಂದು ಭಾಷಣದ ಪ್ರತಿಯನ್ನು ತೊಡೆಯ ಮೇಲಿಟ್ಟುಕೊಂಡು ಸ್ಮಟ್ಸರು ಭಾಷಣ ಮಾಡುವ ದಾರಿಯನ್ನೆ ನೋಡುತ್ತ ಕುಳಿತಿದ್ದರು. ಆದರೆ ಸ್ಮಟ್ಸರು ಬ್ರಿಟಿಶ್ ಹಾಗು ಇನ್ನಿತರ ಪ್ರತಿನಿಧಿಗಳನ್ನು ವಿಚಾರಿಸಿ ಈಗಾಗಲೆ ಧಗಧಗಿಸುತಿದ್ದ ಜ್ವಾಲೆಯಲ್ಲಿ ಮತ್ತೆ ತುಪ್ಪ ಸುರವಿ ಚತುರ್ರಾಷ್ಟ್ರಗಳಲ್ಲಿ ಭಿನ್ನಾಭಿಪ್ರಾಯಕ್ಕೆ ಕಾರಣವಾಗುವದು ಎಂದು ಬಗೆದು ಕೊನೆಯಗಳಿಗೆಯಲ್ಲಿ ತಮ್ಮ ವಿಚಾರವನ್ನು ಬಿಟ್ಟರಂತೆ. ಕಾರಣವೇನೇ ಇರಲಿ ಯುಕ್ತರಾಷ್ಟ್ರಗಳ ಕಾರ್ಯಕ್ರಮ ಪಟ್ಟಿಯಲ್ಲಿ ಹಿಂದೀಯರ ಸಮಸ್ಯೆಯನ್ನು ಕಿತ್ತಿಹಾಕಲು ಜನರಲ್ ಸ್ಮಟ್ಸರು ಪ್ರಯತ್ನಿಸದಿದ್ದುದು ಶುಭಚಿಹ್ನೆಯೆಂದೇ ಹೇಳಬೇಕಾಗುವದು. ಈ ಪ್ರಶ್ನೆಯನ್ನು ರಾಜಕೀಯ ಹಾಗು ಕಾಯಿದೆ ಸಮಿತಿಗಳು ಸಂಯುಕ್ತವಾಗಿ ವಿಚಾರಿಸಬೇಕೆಂದು ಜ. ಸ್ಮಟ್ಸ ಮತ್ತು ಶ್ರೀಮತಿ ವಿಜಯಲಕ್ಷ್ಮೀ ಪಂಡಿತರಲ್ಲಿ ಈ ಮೊದಲೆ ಒಪ್ಪಂದವಾಗಿದ್ದುದರಿಂದ ಯುಕ್ತರಾಷ್ಟ್ರ ಸಭೆಯಲ್ಲಿ ಇದು ಚರ್ಚೆಗೆ ಬರುವದು ನಿಂತಿತೆಂದು ನ್ಯೂಯಾರ್ಕ ಹೆರಾಲ್ಡ ಟ್ರಿಬ್ಯೂನ ಪತ್ರಿಕೆ ಅಭಿಪ್ರಾಯಪಡುತ್ತದೆ. ಆದರೆ ಈ ರೀತಿ ಒಪ್ಪಂದವಾದದ್ದಕ್ಕೆ ಆಧಾರಗಳೇನೂ ಇಲ್ಲ. ಯಾವದೇ ಕಾರಣದಿಂದ ಯುಕ್ತರಾಷ್ಟ್ರಸಭೆಯಲ್ಲಿ ಚರ್ಚಿಸಲ್ಪಡದಿದ್ದರೆ ಮುಂದಿನ ವರ್ಷ ಪಂಡಿತ ಜವಾಹರಲಾಲ ನೆಹರು ಇವರು ಕರೆದಿರುವ ೩೨ ಏಶಿಯಾಟಿಕ ರಾಷ್ಟ್ರಗಳ ಪರಿಷತ್ತಿನಲ್ಲಾದರೂ ಈ ಸಮಸ್ಯೆ ಬಿಡಿಸಲ್ಪಡುವದೆಂದು ಹಿಂದೀ ಸತ್ಯಾಗ್ರಹಮಂಡಳದ ಸೊರಾಬ್ಜಿ ರುಸ್ತುಮಜಿಯವರು ಅಭಿಪ್ರಾಯ ಪಡುತ್ತಾರೆ.

## ಮಾತು ಸಾಲದು, ಕೃತಿ ಬೇಕು

ದಕ್ಷಿಣ ಆಫ್ರಿಕೆಯ ಸರಕಾರದವರು ಹಿಂದೀಯರನ್ನು ಎಷ್ಟೊಂದು ಛಲಿಸುತಿರುವರೆಂಬುದು ಇತ್ತೀಚಿನ ಘಟನೆಗಳಿಂದ ಎಲ್ಲರಿಗೂ ಗೊತ್ತಿದೆ. ಹೀಗಿದ್ದರೂ ಜನರಲ್ ಸ್ಮಟ್ಸರ ಯುನಾಯಿಟೆಡ್ ಪಕ್ಷದ ಜನರಲ್ ಸೆಕ್ರೆಟರಿಯವರು ಒಂದು ಪ್ರಕಟನೆ ಹೊರಡಿಸಿ ತಮ್ಮ ಧೋರಣದ ಬಗ್ಗೆ ನಡೆದ ಅಪಪ್ರಚಾರದ ಬಗ್ಗೆ ಅಸಮ್ಮತಿಯನ್ನು ವ್ಯಕ್ತಪಡಿಸಿ ಅಂತರ್‌ರಾಷ್ಟ್ರೀಯ ಪರಿಷತ್ತಿನವರು ಮಹತ್ವದ ವಿಷಯಗಳನ್ನು ಚರ್ಚಿಸುತಿರುವ ಈ ಕಾಲಕ್ಕೆ ಇಂಥ ಅಪಪ್ರಚಾರ ಒಗ್ಗದೆಂದು ಅಭಿಪ್ರಾಯಪಟ್ಟಿರುವರು. ಯುರೋಪೇತರರ, ಆಫ್ರಿಕೆಯ ಕಪ್ಪುಬಣ್ಣದವರಿರಲಿ ಇಲ್ಲವೆ ಏಶಿಯದವರಿರಲಿ—ನ್ಯಾಯ್ಯವಾದ ಆಸೆ ಆಕಾಂಕ್ಷೆಗಳ ಬಗ್ಗೆ ಸಹಾನುಭೂತಿ ಪರಧೋರಣವನ್ನು ತಾಳುವದೇ ತಮ್ಮ ಗುರಿಯಾಗಿದೆಂದು ಸಾರುವರು. ಅವರ ಪ್ರಗತಿ ಮತ್ತು ಅಭಿವೃದ್ಧಿಯ ದಿಸೆಯಲ್ಲಿಯೆ ಆಫ್ರಿಕೆಯಲ್ಲಿಯ ಯೂನಿಯನ್ ಸರಕಾರ ಪ್ರಯತ್ನಿಸುತಿದೆಂದು ಹೇಳಿದ್ದಾರೆ. ಆದರೆ ಬಾಯಿಂದ ಸಹಾನುಭೂತಿಯ ಮಾತುಗಳನ್ನಾಡಿದರೆ ತೀರದು ಅದಿದಂತೆ ಕೃತಿಮಾಡಿ ತೋರಿಸಬೇಕು. ಹಿಂದೀಯರ ವಿರುದ್ಧ ಅವರೆತ್ತಿದ ಶಸ್ತ್ರಗಳನ್ನು ನೋಡಿದರೆ ಸರಕಾರದ ಈ ಹೇಳಿಕೆ ಕೇವಲ ಜೊಳ್ಳುಪೊಳ್ಳೆಂಬುದು ನಿರ್ವಿವಾದ. ಯುಕ್ತರಾಷ್ಟ್ರ ಸಭೆಯಲ್ಲಿ ಯೂನಿಯನ್ ಸರಕಾರದವರು ವಹಿಸುವ ಧೋರಣದಿಂದ ಅವರ ಮಾತಿನ ಸತ್ಯತೆ ಸ್ಪಷ್ಟವಾಗುವದು.

## ಯೂನಿಯನ್ ಸರಕಾರದ ಮನವಿ

ಯೂನಿಯನ್ ಸರಕಾರದವರು ೪೬ ಪುಟಗಳ ಮನವಿಯೊಂದನ್ನು ಸಿದ್ಧಪಡಿಸಿ ಯುಕ್ತರಾಷ್ಟ್ರ ಸಂಘಕ್ಕೆ ಒಪ್ಪಿಸಿರುವರು. ಸರಕಾರದವರು ತಮ್ಮ ಆಳಿಕೆಯನ್ನು ಇದರಲ್ಲಿ ಸಮರ್ಥಿಸಿಕೊಳ್ಳುತ್ತ ಭೂಸುಧಾರಣ ಕಾಯಿದೆ ಮತ್ತು ಹಿಂದಿ ಪ್ರಾತಿನಿಧ್ಯ ಕಾಯಿದೆಯಲ್ಲಿ ಸರಕಾರದವರು ಭೇದಭಾವ ಮಾಡಿರುವರೆಂಬ ಆರೋಪಕ್ಕೆ ವಿವರವಾಗಿ ಉತ್ತರ ಕೊಡುವ ಸಾಹಸ ಮಾಡಿದ್ದಾರೆ. ಆಫ್ರಿಕೆಯ ಬೇರೆ ಯಾವ ಭಾಗದಲ್ಲಿಯೂ ಇಷ್ಟೊಂದು ಪ್ರಗತಿ ಸಾಧ್ಯವಾಗಿಲ್ಲ. ಅದರಲ್ಲಿಯೂ ಯೂನಿಯನ್ ಸರಕಾರದಲ್ಲಿ ಹಿಂದೀಯರಿಗೆ ಆದಷ್ಟು ಲಾಭ ಬೇರೆ ಯಾವ ಜನಾಂಗದವರಿಗೂ ಆಗಿಲ್ಲೆಂದು ಪ್ರತಿಪಾದಿಸಲಾಗಿದೆ. ಯೂನಿಯನ್‌ದ ಪ್ರಗತಿಯ ಲಾಭವನ್ನಾದರೂ ಪಡೆಯಬೇಕು. ಇಲ್ಲವೆ ಅದನ್ನು ನಿರಾಕರಿಸಬೇಕು. ಇವೆರಡನ್ನೂ ಬಿಟ್ಟು ಅವರು ಹಿಂದುಸ್ಥಾನ ಸರಕಾರಕ್ಕೆ ಬಿನ್ನವಿಸುತ್ತ ಕುಳಿತರೆ ಮತ್ತು ಆ ಸರಕಾರದವರು ಅವರ ಪರವಾಗಿ ತಮ್ಮ ಮಧ್ಯಸ್ಥಿಕೆಯ ಹಕ್ಕನ್ನು ಬಜಾಯಿಸುತ್ತ ನಡೆದರೆ ಎಲ್ಲ ರಾಷ್ಟ್ರಗಳ ಸ್ನೇಹಸಂಬಂಧ ಕುಂದುತ್ತ ನಡೆಯುವದು. ಇದರಿಂದ ಯಾರಿಗೂ ಹಿತವಾಗದು ಎಂದೂ ಯೂನಿಯನ್ ಸರಕಾರದವರು ಎಚ್ಚರಿಕೆ ಕೊಟ್ಟಿರುತ್ತಾರೆ. ಹಿಂದೀಯರು ದಕ್ಷಿಣ ಆಫ್ರಿಕೆಯಲ್ಲಿ ಇರಬಯಸುತಿದ್ದರೆ ಸರಕಾರದವರು ಹಾಕುವ ಕರಾರು ಕಟ್ಟಳೆಗಳಿಗೆ ಮನ್ನಣೆ ಕೊಟ್ಟು ಇರಬೇಕಾಗುವದು. ಯೂನಿಯನ್ ಸರಕಾರ ಸ್ವಾಯತ್ತ ಸಾರ್ವಭೌಮ ಸರಕಾರವಾಗಿದ್ದು ತನ್ನ ಅಂತಃಕಾರಭಾರದಲ್ಲಿ ಎರಡನೇಯವರಾರೂ ಕೈಹಾಕದಂತೆ ನೋಡಿಕೊಳ್ಳುವದು ಎಂದು ಮುಂತಾಗಿಯೂ ಈ ಮನವಿಯಲ್ಲಿ ಹೇಳಲಾಗಿದೆ. ಇದನ್ನು ನೋಡಿದರೆ ಯೂನಿಯನ್ ಸರಕಾರದವರು ಹಿಂದೀಯರ ಬಗ್ಗೆ ಯಾವ ಬಗೆಯ ಧೋರಣ ವಹಿಸಿರುವರೆಂಬುದು ಸ್ಪಷ್ಟವಾಗುವದು. ಅಂತಸ್ಸಮಸ್ಯೆಯ ನೆವ ಮಾಡಿ ಹೊರಗಿನವರಾರೂ ಅದರಲ್ಲಿ ಕೈ ಹಾಕಬಾರದೆಂದು ಯೂನಿಯನ್ ಸರಕಾರ ಆಗ್ರಹ ತಳೆದರೆ ಹಿಂದುಸ್ಥಾನ ಮತ್ತು ದಕ್ಷಿಣ ಆಫ್ರಿಕೆಯ ಸ್ನೇಹಸಂಬಂಧಕ್ಕೆ ಭಂಗ ಬಂದು ಅದರ ಪರಿಣಾಮ ಚೆನ್ನಾಗಿ ಆಗದೆಂಬುದು ನಿರ್ವಿವಾದವಾಗಿದೆ.

## ಚತುರ್ರಾಷ್ಟ್ರ ಮಂತ್ರಿಗಳ ಸಭೆ

ಚತುರ್ರಾಷ್ಟ್ರ ವಿದೇಶ ಮಂತ್ರಿಗಳ ಸಭೆ ನ್ಯೂಯಾರ್ಕಿನಲ್ಲಿ ಪ್ರಾರಂಭವಾಗಿದೆ. ಇಟಾಲಿಯನ್ ಶಾಂತಿ ಒಡಂಬಡಿಕೆಯ ಕರಾರುಗಳು ಇದೀಗ ಚರ್ಚಿಸಲ್ಪಡುತ್ತವೆ. ಈ ಚರ್ಚೆಯ ಕಾಲಕ್ಕೆ ಇಟಾಲಿಯನ್ ಹಾಗು ಯುಗೊಸ್ಲಾವ ಪ್ರತಿನಿಧಿಗಳನ್ನೂ ಆಮಂತ್ರಿಸಬೇಕೆಂದು ನಿರ್ಧರಿಸಲಾಗಿದೆ. ಇಟಾಲಿಯನ್ ಒಡಂಬಡಿಕೆಯ ಕರಾರುಗಳು ಅಟ್ಲಾಂಟಿಕ ಸನದಿನ ತತ್ವಗಳಿಗೆ ಅನುಸರಿಸಿಲ್ಲೆಂದು ಇಟಾಲಿಯನ್ ಸರಕಾರ ಅಭಿಪ್ರಾಯ ಪಡುತ್ತದೆ ಮತ್ತು ಈ ಕೆಲ ಕರಾರಗಳನ್ನು ನಿಷೇಧಿಸುವ ಪ್ರಕಟನೆಯನ್ನೂ ಸಿದ್ಧಪಡಿಸಿದೆ. ಭಾವೀ ಇಟಾಲಿಯನ್ ಗಡಿಯ ಸಂಬಂಧದಲ್ಲಿ ಕೆಲ ಆಕ್ಷೇಪಗಳನ್ನೂ ಎತ್ತಲಾಗಿದೆ. ಈ ಚರ್ಚೆಯ ಕಾಲಕ್ಕೆ ಬ್ರಿಟಿಶ್ ಪರರಾಷ್ಟ್ರ ಮಂತ್ರಿ ಬೆವಿನ್ ಮತ್ತು ಅಮೇರಿಕೆಯ ಪರರಾಷ್ಟ್ರ ಮಂತ್ರಿ ಬಾಯನ್ಸ್‌ರು ಇಟಾಲಿಯನ್ ಯುಗೊಸ್ಲಾವ ಗಡಿ ಪ್ರಶ್ನೆಯನ್ನು ಪುನಃ ಚರ್ಚೆಗೆ ತೆಗೆದುಕೊಳ್ಳಬೇಕೆಂಬ ಮೋಲೊಟೊವರ ಸೂಚನೆಯನ್ನು ವಿರೋಧಿಸಿದರು. ಈ ಬಗ್ಗೆ ದೀರ್ಘ ಚರ್ಚೆಯಾದರೂ ಯಾವ ನಿರ್ಣಯಕ್ಕೂ ಬರಲಿಲ್ಲ. ಇಟಾಲಿಯನ್ ಆಸ್ಟ್ರಿಯನ್ ಗಡಿ ವ್ಯವಹಾರ ಒಡಂಬಡಿಕೆ ಸದ್ಯಕ್ಕೆ ಅಪ್ರಸ್ತುತವಿರುವದಾಗಿ ಮೊಲೊಟೊವರು ಅದನ್ನು ವಿರೋಧಿಸಿದರು. ದತ್ತ ಪ್ರದೇಶಗಳಲ್ಲಿಯ ಜನರಿಗೆ ಸಂಬಂಧಿಸಿದ ಕರಾರುಗಳಲ್ಲಿ ಮೂಲಭೂತ ಮಾನವೀಯ ಹಕ್ಕುಗಳನ್ನು ಸೇರಿಸಬಾರದೆಂದೂ ಮೊಲೊಟೋವರು ವಿರೋಧಿಸಿದರು. ನಷ್ಟ ಪರಿಹಾರದ ಚರ್ಚೆಯ ಕಾಲಕ್ಕೆ ಯುಗೊಸ್ಲಾವಕ್ಕೆ ಗ್ರೀಸಕ್ಕಿಂತ ಇಮ್ಮಡಿ ಪರಿಹಾರ ಕೊಡಬೇಕೆಂದು ಮೊಲಟೊವರು ಬೇಡಿದರು. ಬೆವಿನ್‌ರು ಅದನ್ನು ಬಲವಾಗಿ ವಿರೋಧಿಸಿ ಗ್ರೀಸವು ವಿನಾಕಾರಣ ದಾಳಿಗಾಹುತಿಯಾದುದನ್ನು ತಿಳಿಸಿದರು. ಈ ಚರ್ಚೆಯನ್ನು ನೋಡಿದರೆ ಆಯಾ ಪ್ರಬಲ ರಾಷ್ಟ್ರಗಳು ಕೇವಲ ತಮ್ಮ ವರ್ಚಸ್ಸಿಗೆ ಬಲಿಯಾದ ರಾಷ್ಟ್ರಗಳ ಹಿತಸಂಬಂಧಗಳ ಕಡೆಗೆಯೆ ಹೆಚ್ಚು ಗಮನ ಕೊಡುತಿರುವವೆಂಬದು ಸ್ಪಷ್ಟವಾಗುವದು. ಈ ಪರಿಸ್ಥಿತಿಯಲ್ಲಿ ಚತುರ್ರಾಷ್ಟ್ರ ವಿದೇಶ ಮಂತ್ರಿಗಳ ಪರಿಷತ್ತು ಅದೆಂತು ಯಶಸ್ವಿಯಾಗುವದೊ ಸಂಶಯಾಸ್ಪದವಾಗಿದೆ. ಸ್ವಾರ್ಥ, ಮಹತ್ವಾಕಾಂಕ್ಷೆ, ಪ್ರಭುತ್ವ ಪಿಪಾಸೆ ಮುಂತಾದ್ದೆಲ್ಲ ಮಾಯವಾಗಿ ಅಲ್ಪರಾಷ್ಟ್ರಗಳಿಗೂ ನಿಜವಾದ ಸ್ವಾತಂತ್ರ್ಯ ಕೊಡುವ ಧೋರಣೆಯಿಂದ ವಿಚಾರ ನಡಿಸಿದರೆ ಮಾತ್ರ ಉದ್ದಿಷ್ಟ ಸಾಧ್ಯವಾಗುವದು.

## ರಶಿಯದ ಧೋರಣ

ಇದೇ ವಿಷಯವಾಗಿ ರಶಿಯವು ತನ್ನ ಧೋರಣವನ್ನು ಆಕಾಶವಾಣಿ ಮೂಲಕ ಸ್ಪಷ್ಟಪಡಿಸಿದೆ. ರಶಿಯವು ಜಾತಿ ಮತ ಜನಾಂಗಗಳನ್ನೆಣಿಸದೆ ಎಲ್ಲ ಜನರೂ ಸಮಾನರೆಂಬ ತತ್ವವನ್ನು ಅನುಸರಿಸುತ್ತ ಬಂದಿದೆ. ಅನೇಕ ಅಂತರ್‌ರಾಷ್ಟ್ರೀಯ ಪರಿಷತ್ತುಗಳಲ್ಲಿ ದಕ್ಷಿಣ ಆಫ್ರಿಕೆಯ ಯೂನಿಯನ್ ಸರಕಾರದ ಪ್ರತಿನಿಧಿಗಳು ಸಣ್ಣ ರಾಷ್ಟ್ರಗಳ ಹಕ್ಕು ಬಾಧ್ಯತೆಗಳ ಸಂಬಂಧದಲ್ಲಿ ಪ್ರಜಾಪ್ರಭುತ್ವಕ್ಕೆ ಮಾನವ್ಯಕ್ಕೆಮರ್ಯಾದೆ ಕೊಡುವ ಸಂಬಂಧದಲ್ಲಿ ಅನೇಕ ಭಾಷಣಗಳನ್ನು ಮಾಡಿದ್ದಾರೆ. ಆದರೆ ತಮ್ಮ ದೇಶದಲ್ಲಿಯ ವಸಾಹತು ಆಡಳಿತದ ಸಂಬಂಧದಲ್ಲಿ ಚಕಾರ ಶಬ್ದವೆತ್ತಿರಲಿಲ್ಲ. ಮೂಲ ನಿವಾಸಿಗಳಾದ ನಿಗ್ರೋಗಳನ್ನೂ ಅಲ್ಲಿ ವಾಸಿಸಿರುವ ಹಿಂದೀಯರನ್ನೂ ಈ ಸರಕಾರದವರು ನಿರ್ಬಂಧದಲ್ಲಿಟ್ಟಿರುವರು.

—೧೨ನೇ ಪುಟಕ್ಕೆ

## ಮಿರತ ಕಾಂಗ್ರೆಸ ಅಧಿವೇಶನ

ಅಧಿವೇಶನದ ತಾರೀಕು

ಕಾಂಗ್ರೆಸ ಕಾರ್ಯ ಸಮಿತಿಯ ಸಭೆ ದಿಲ್ಲಿಯಲ್ಲಿ ನವಂಬರ ೧೯ ರಿಂದ ಪ್ರಾರಂಭವಾಗುವದು. ವಿಷಯನಿಯಾಮಕ ಸಮಿತಿಯ ಸಭೆ ಮಿರತಿನಲ್ಲಿ ೨೧—೨೨ ಕ್ಕೆ ನಡೆಯುವದು. ಕಾಂಗ್ರೆಸ್ಸಿನ ವಾರ್ಷಿಕಾಧಿವೇಶನ ಮಿರತಿನಲ್ಲಿ ತಾ ೨೩–೨೪ ಮತ್ತು ಅವಶ್ಯವೆನಿಸಿದರೆ ೨೫ ಕ್ಕೆ ನಡೆಯುವದು.

ತಿಕೀಟುಗಳ ದರಗಳ ವಿವರ

ತಿಕೀಟಿನ ದರಗಳು ಇಂತಿವೆ. ಬಹಿರಂಗ ಅಧಿವೇಶನದ ತಿಕೀಟಿನ ದರಗಳು ಪ್ರೇಕ್ಷಕರಿಗೆ ೧೦ ಸಾವಿರ, ೫ ಸಾವಿರ, ೧ ಸಾವಿರ, ೫೦೦ ೧೦೦, ೨೫ ಮತ್ತು ೧೦ ರೂಪಾಯಿ. ವಿಷಯನಿಯಾಮಕ ಸಮಿತಿಯ ತಿಕೀಟು ೨೫ ರೂಪಾಯಿ.

ಪ್ರತಿನಿಧಿಗಳಿಗೆ ವಿಷಯನಿಯಾಮಕ ಸಮಿತಿ ತಿಕೀಟು— ೧೦ ರೂಪಾಯಿ.

ಕಾರ್ಯಕರ್ತರ ತಿಕೀಟು–ಅಝಾದ ಹಿಂದ ಸೇನೆಯ ಸೈನಿಕರು ಹಾಗು ಕಾಂಗ್ರೆಸ್ಸಿನ ಯಾವದೇ ಆಂದೋಲನದಲ್ಲಿ ಸೆರೆಮನೆಯನ್ನು ಸೋಸಿದವರು ಇಂಥವರಿಗೆ ಪ್ರತಿ ತಿಕೀಟಿಗೆ ೫ ರೂಪಾಯಿ.

ತಿಕೀಟು ಬೇಕಾದವರು ತಮ್ಮ ತಮ್ಮ ಜಿಲ್ಹಾ ಕಾಂಗ್ರೆಸ ಕಮೀಟಿ ಮುಖಾಂತರ ಮೊದಲೆ ಪಡೆದುಕೊಳ್ಳಬೇಕು. ಆದರೆ ತಿಕೀಟಿನ ಹಣವನ್ನು ಪ್ರಾಂತಿಕ ಕಾಂಗ್ರೆಸ ಕಮೀಟಿ ಕಡೆಗೆ ಮುಂಚಿತವಾಗಿಯೇ ಕೊಡಬೇಕಾಗುವದು.

ವಸತಿ ಸೌಕರ್ಯ

ಕಾಂಗ್ರೆಸ್ ಮಹಾಧಿವೇಶನಕ್ಕೆ ಹೋಗುವ ಪ್ರೇಕ್ಷಕರಿಗೆ ಉಳಿದುಕೊಳ್ಳುವುದಕ್ಕಾಗಿ ಏರ್ಪಡಿಸಿದ ಸ್ಥಳ ಸೌಕರ್ಯದ ವಿವರಗಳು ಇಂತಿವೆ—

ಕುಟುಂಬಸ್ಥರ ಕುಟೀರ- ಅಡಿಗೆಮನೆ ಬಚ್ಚಲಮನೆ, ಕಕ್ಕಸ, ನೀರು ದೀಪ, ಮುಂತಾದ ಸೌಕರ್ಯಗಳುಳ್ಳ ಎರಡು ಭಾವಣಿ ಬಾಡಿಗೆ೨೦೦ ರೂ ಒಂದು ಭಾವಣಿ ಬಾಡಿಗೆ ೧೦೦ ರೂ. ಪ್ರೇಕ್ಷಕರ ಶಿಬಿರದಲ್ಲಿ ಹೊರಸು ಮುಂತಾದವುಗಳುಳ್ಳ ಪ್ರತಿಸ್ಥಳಕ್ಕೆ ೧೫ ರೂ ಹೊರಸುಮುಂತಾದವುಗಳಿಲ್ಲದಪ್ರತಿಸ್ಥಳಕ್ಕೆ ೧೦ ರೂ. ಊಟದ ಸಲುವಾಗಿ ಬೇರೆ ವೆಚ್ಚವಾಗುವದು. ಪ್ರತಿ ಊಟಕ್ಕೆ ೧ರೂಪಾಯಿ ಕೊಡಬೇಕಾ

# ಭೂಮಧ್ಯ ಸಮುದ್ರದ ಸ್ವಾಮಿತ್ವದ ಬಗ್ಗೆ ಬ್ರಿಟನ್ನಿನ ಹಂಬಲ

(ಮೊದಲನೆ ಪುಟದಿಂದ ಮುಂದರಿದುದು)

ಕ್ಷೇತ್ರಗಳನ್ನು ಮತ್ತು ಪಾಯಿಪಲಾಯಿನಗಳನ್ನು ಒಡೆತನದಲ್ಲಿಟ್ಟುಕೊಂಡಿದೆ. ಜಿಬ್ರಾಲ್ಟರ ಉತ್ತರ ಅಫ್ರಿಕಾ, ಮಾಲ್ಟಾ, ಇಟಲಿ, ಗ್ರೀಸ್, ಇರಾಕ, ಟ್ರಾನ್ಸಜೋರ್ಡನ್, ಫ್ಯಾಲಿಸ್ತಾನ ಮತ್ತು ಸಾಯಪ್ರಸದಲ್ಲಿ ಬ್ರಿಟಿಶ್ ನೌಕಾ ಮತ್ತು ವೈಮಾನಿಕ ಠಾಣೆಗಳಿರುವದರಿಂದ ಭೂಮಧ್ಯ ಸಮುದ್ರಪ್ರದೇಶ, ಬಾಲ್ಕನದ್ವೀಪಕಲ್ಪ, ಏಶಿಯಾ ಮಾಯನರ ಮತ್ತು ಕೆಂಪು ಸಮುದ್ರ ಪ್ರದೇಶಗಳನ್ನೆಲ್ಲ ನಿಯಂತ್ರಿಸಲು ಸಮರ್ಥವಾಗಿದೆ. ಯುದ್ಧ ಕಾಲದಲ್ಲಿಯೇನೋ ಅಮೇರಿಕೆ ಈ ಪ್ರದೇಶದಲ್ಲಿ ಕೆಲ ಸ್ಥಳಗಳನ್ನು ವಶಪಡಿಸಿಕೊಂಡು ಭದ್ರವಾಗಿ ಕಾಲೂರಿದ್ದುಂಟು. ಅಂಗ್ಲೋ ಸಾಕ್ಸನ್ ರಾಷ್ಟ್ರಗಳಲ್ಲಿ ಒಡಂಬಡಿಕೆ ಅಧಿಕೃತವಾಗಿ ನಿರಾಕರಿಸಲಾಗುತಿದ್ದರೂ ಆ ಒಡಂಬಡಿಕೆಯನ್ವಯ ಭೂಮಧ್ಯ ಸಮುದ್ರ ಪ್ರದೇಶ ಬ್ರಿಟಿಶ್ ಪ್ರಭುತ್ವಕ್ಕೊಳಗಾದ ದೇಶವೆಂದು ತಿಳಿಯಲಾಗುತ್ತದೆ. ಅಮೇರಿಕೆಯಾದರೂ ಬ್ರಿಟಿಶರ ಈ ಕಾರಸ್ಥಾನವನ್ನು ಬೆಂಬಲಿಸುತ್ತದೆ. ಆದರೆ ಈ ಪ್ರದೇಶದಲ್ಲಿ ಇವೆರಡೂ ರಾಷ್ಟ್ರಗಳಲ್ಲಿನ ವೈಮನಸ್ಯ ಇಲ್ಲದಂತಾಗಿಸಲು ಒಡಂಬಡಿಕೆ ಸಹಾಯಕವಾಗಲಾರದು. ಬ್ರಿಟನ್‌ವೊಂದೇ ಭೂಮಧ್ಯ ಸಮುದ್ರದಲ್ಲಿ ಮಹತ್ವದರಾಷ್ಟ್ರವಾಗಿದ್ದರೂ ಫ್ರಾನ್ಸ್, ಇಟಲಿ ಮತ್ತು ಗ್ರೀಸದಲ್ಲಿಯ ಅರಸರ ಮತ್ತು ಅರಬ ಶೇಖರ ಅಭದ್ರ ಒಡಂಬಡಿಕೆಯನ್ನೆ ಅದು ಅವಲಂಬಿಸಿದೆಯಾದರಿಂದ ಅದರ ಸ್ಥಾನಮಾನಗಳು ಅಭದ್ರವಾಗಿವೆ, ಗಂಡಾಂತರಪ್ರದವಾಗಿವೆ.

### ಅಂಗ್ಲ-ಅಮೇರಿಕೆ ತಿಕ್ಕಾಟ

ಅಮೇರಿಕೆ ತನ್ನ ಬಂಡವಾಳಶನದ ಬೊಜ್ಜು ಬೆಳೆಸುವದಕ್ಕಾಗಿ ಹೊಸ ಹೊಸ ಪೇಟೆಗಳನ್ನು ಹುಡುಕುತ್ತಿದೆಯಲ್ಲದೆ ಕಚ್ಚಾಮಾಲುಗಳ ಉತ್ಪಾದನೆಯನ್ನು ಹುಡುಕುತಿದೆ. ರಾಜಕೀಯ ವರ್ಚಸ್ಸನ್ನು ಪ್ರಸ್ಥಾಪಿಸಲು ಮತ್ತು ಹೊಸ ಹೊಸ ಆಯಕಟ್ಟಿನ ಠಾಣೆಗಳನ್ನು ನಿಯಂತ್ರಿಸಲು ಹೆಣಗುತ್ತದೆ. ಯುದ್ಧಪೂರ್ವದಲ್ಲಿ ಪ್ಯಾಸಿಫಿಕದಲ್ಲಿ ಬ್ರಿಟಿಶ್ ಮತ್ತು ಅಮೇರಿಕೆಯ ಹಿತಸಂಬಂಧಗಳಲ್ಲಿ ತಿಕ್ಕಾಟವೆ ನಡೆಯುತಿದ್ದಿತು. ಕೆಲವುಟ್ಟಿಗೆ ಅಟಲಾಂಟಿಕದಲ್ಲಿಯೇ ತಿಕ್ಕಾಟವಿದ್ದಿತು. ಇಂದು ಭೂಮಧ್ಯಸಮುದ್ರ ಮತ್ತು ಸಮೀಪದ ಹಾಗು ಮಧ್ಯಪೂರ್ವ ರಾಷ್ಟ್ರಗಳಲ್ಲಿ ಬ್ರಿಟನ್ ಅಮೇರಿಕೆಗಳಲ್ಲಿ ತಿಕ್ಕಾಟವೇಳುವ ಸಂಭವವಿದೆ. ಅಮೇರಿಕೆಯ ಪೆಟ್ರೋಲಿಯಂ ರಿಝರ್ವ ಕಾರಪರೇಶನದವರು ಟ್ರಾನ್ಸ ಅರೇಬಿಯನ್ ಪಾಯಿಪಲಾಯಿನ ಹಾಕಬೇಕೆಂದು ಯೋಜಿಸಿದ್ದಾರೆ. ಸೌದೀಅರೇಬಿಯಾಪ್ರದೇಶದಲ್ಲಿ ಈ ಲಾಯಿನ್ ಹಾಯ್ದು ಹೋಗಲಿಕ್ಕೆ ಆ ಸರಕಾರದವರು ಈಗಾಗಲೆ ಅಪ್ಪಣೆ ಕೊಟ್ಟಿದ್ದಾರೆ. ಅಲ್ಲದೆ ಅಮೇರಿಕೆಯ ಎಕ್ಸಪೋರ್ಟ ಇಂಪೋರ್ಟ ಬ್ಯಾಂಕಿನವರು ಆ ಸರಕಾರದವರಿಗೆ ೧ ಕೋಟಿ ಡಾಲರ ಸಾಲ ಕೊಟ್ಟಿದ್ದರಿಂದ ಅಮೇರಿಕೆ ಈ ಪ್ರದೇಶದಲ್ಲಿ ತನ್ನ ಕಾಲನ್ನು ಭದ್ರವಾಗಿ ಊರಿದೆಂಬುದು ಸ್ಪಷ್ಟವಾಗುತ್ತದೆ. ಸೌದೀ ಅರೇಬಿಯಾದ ದಹರಾನದಲ್ಲಿ ಅಮೇರಿಕೆಯ ಸೈನಿಕರು ದೊಡ್ಡ ಹೊಸ ವೈಮಾನಿಕ ಠಾಣೆಯನ್ನು ಕಟ್ಟಿ ಮುಗಿಸಿರುವರೆಂದು ತಿಳಿಯುತ್ತದೆ. ದಹರಾನ ಮತ್ತು ಪಾಲಿಸ್ತಾನಗಳ ನಡುವೆ ಎರಡು ಕಾದಿಟ್ಟ ವೈಮಾನಿಕ ಕೇಂದ್ರಗಳನ್ನು ಅಮೇರಿಕೆಯ ಸೈನಿಕರು ನಿಯಂತ್ರಿಸುತ್ತಾರೆ. ಸೌದೀ ಅರೇಬಿಯಾದಂಥ ಮಹತ್ವದ ಪ್ರದೇಶದಲ್ಲಿ ಅಮೇರಿಕನ್‌ರು ಇಂತು ವೈಮಾನಿಕ ಕೇಂದ್ರಗಳನ್ನು ಪ್ರಸ್ಥಾಪಿಸಿದ್ದಾರೆ. ಹಿಂದುಸ್ತಾನದಲ್ಲಿಯೂ ಅಮೇರಿಕೆ ಹೆಚ್ಚು ಬಂಡವಲವನ್ನು ವ್ಯಯಮಾಡಹತ್ತಿದೆ. ಇಲ್ಲಿಯೂ ಕೇವಲ ಅರ್ಥಿಕ ಚಂಚುಪ್ರವೇಶವಿಲ್ಲ. ಕೈರೋ ಮತ್ತು ಹೆನೇಫೀಲ್ಡಗಳಲ್ಲಿ ಅಮೇರಿಕನ್‌ರು ಇನ್ನೂ ಸೈನಿಕ ವೈಮಾನಿಕ ಠಾಣೆಗಳನ್ನು ನಿಯಂತ್ರಿಸುತಿರುವರು. ಅಮೇರಿಕೆಯ ನೌಕಾ ದಳದವರು ಯುರೋಪಿನಲ್ಲಿ ಚಟುವಟಿಕೆ ನಡೆಸುತ್ತಿದ್ದಾಗ ಭೂಮಧ್ಯ ಸಮುದ್ರದಲ್ಲಿಯ ಬ್ರಿಟಿಶ ಠಾಣೆಗಳನ್ನು ಉಪಯೋಗಿಸುತಿದ್ದರು. ಆದರೆ ಫೇಸಿಸ್ಟ ಇಟಲಿ ಶರಣಾಗತವಾದ ಬಳಿಕ ಅಮೇರಿಕೆಯ ಈ ನೌಕೆಗಳು ಪಾಲೆರೊ ಬಂದರದಲ್ಲಿ ತಳವೂರಿ ಯುದ್ಧ ಮುಗಿದ ಬಳಿಕವೂ ಅಲ್ಲಿಯೇ ಉಳಿದವು. ಈ ಬಂದರಗಳಲ್ಲಿ ಶಾಶ್ವತವಾಗಿ ತಳವೂರಬೇಕೆಂದು ಅಮೇರಿಕೆಯ ಮನೀಷೆಯಾಗಿದೆಂದು ಪತ್ರಿಕೆಗಳಲ್ಲಿಯಬರೆಹಗಳಿಂದ ಗೊತ್ತಾಗುತ್ತದೆ. ಈ ಪ್ರದೇಶದಲ್ಲಿ ಅಮೇರಿಕೆಯ ಒಂದು ಗೇಣು ಭೂಮಿಯಿಲ್ಲದಿದ್ದರೂ ನೌಕಾ ಠಾಣೆಗಳನ್ನು ಕಾಯಂ ಮಾಡಿಕೊಳ್ಳಬೇಕೆಂದು ಅದರ ಮನೀಷೆ. ಭೂಮಧ್ಯ ಸಮುದ್ರ ಪ್ರದೇಶದಲ್ಲಿ ಅಮೇರಿಕೆ ತನ್ನ ಪ್ರಸ್ಥ ಬೆಳೆಸಲು ಪ್ರಯತ್ನಿಸುತಿದೆಂಬುದು ಆ ಸರಕಾರದ ಚಟವಟಿಕೆಗಳಿಂದ ಸ್ಪಷ್ಟವಾಗುತ್ತದೆ.

ಫ್ರೆಂಚ ಮೊರೋಕೋದಲ್ಲಿ ಲಿಯಾಟಿ ಬಂದರದಲ್ಲಿ ಅಮೇರಿಕೆ ನೌಕಾ ದಳಗಳು ಯುದ್ಧ ಕಾಲದಲ್ಲಿ ತಳವೂರಿದ್ದವು. ಈಗಲೂ ಅಮೇರಿಕೆಯ ವಶದಲ್ಲಿಯೆ ಇದೆ ಆ ಬಂದರು. ಜರ್ಮನಿಯಲ್ಲಿ ತಮ್ಮ ನಿಯಂತ್ರಣದಲ್ಲಿಯ ದಳಗಳಿಗೆ ನೌಕಾ ಕೇಂದ್ರವಿರಬೇಕೆಂಬ ನೆವದಿಂದ ಅಮೇರಿಕೆ ಈ ಬಂದರವನ್ನು ಈಗಲೂ ನಿಯಂತ್ರಿಸುತ್ತಿದೆ. ಈ ಲಿಯಾಟಿ ಬಂದರವು ಭೂಮಧ್ಯಸಮುದ್ರದ ಹೊರಗಿದ್ದರೂ ಜಿಬ್ರಾಲ್ಟರ ಸಾಮುದ್ರಧುನಿಗೆ ಅತಿ ಸಮೀಪದಲ್ಲಿ ಇರುವುದರಿಂದ ಪಶ್ಚಿಮ ಭೂಮಧ್ಯ ಸಮುದ್ರದ ಮೇಲೆ ಬಹಳ ವರ್ಚಸ್ಸನ್ನುಪಯೋಗಿಸಲು ಅದು ಸಹಾಯಕವಾಗಿದೆ.

ಈ ರೀತಿಯಾಗಿ ಅಮೇರಿಕೆ ಮತ್ತು ಬ್ರಿಟನ್ ಭೂಮಧ್ಯ ಸಮುದ್ರ ಪ್ರದೇಶದಲ್ಲಿಯ ಮಹತ್ವದ ಸ್ಥಳಗಳನ್ನು ಒಂದಿಲ್ಲೊಂದು ಕಾರಣಗಳಿಂದ ತಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತಿವೆ. ಭೂಮಧ್ಯ ಸಮುದ್ರವನ್ನು ಬ್ರಿಟಿಶ್ ಸರೋವರವನ್ನಾಗಿ ಮಾಡಲು ಬ್ರಿಟನ್ ಅಮೇರಿಕೆ ಪ್ರಯತ್ನಿಸುತಿವೆಂದು ಸಿನೇಟರರು ಹೇಳಿದ್ದುಂಟು. ಮೇಲೆ ಹೇಳಿದಂತೆ ಭೂಮಧ್ಯ ಸಮುದ್ರ ಅತಿ ಮಹತ್ವದ ಜಲಮಾರ್ಗವಾಗಿದ್ದುದರಿಂದ ಯಾವುದೊಂದು ರಾಷ್ಟ್ರವು ಅದನ್ನು ನಿಯಂತ್ರಿಸಲು ಪ್ರಯತ್ನಿಸುವುದರಿಂದ ರಾಷ್ಟ್ರ ರಾಷ್ಟ್ರಗಳಲ್ಲಿ ತಿಕ್ಕಾಟವೆದ್ದು ಜಾಗತಿಕ ಶಾಂತಿ ಗಂಡಾಂತರದಲ್ಲಿ ಬೀಳುವುದೆಂಬುದು ನಿಶ್ಚಿತ. ಇದನ್ನು ತಿಳಿದುಕೊಂಡು ಆಯಾ ರಾಷ್ಟ್ರಗಳು ತಮ್ಮ ಧೋರಣ ಮಾರ್ಪಡಿಸಿಕೊಂಡರೆ ಮಾತ್ರ ಎಲ್ಲವೂ ಸರಾಗವಾಗಿ ಸಾಗಬಲ್ಲುದು.







## ಬಿಹಾರಿಗಳಿಗೆ

"ಕನಸಿನಲ್ಲಿ ನನಗೆ ಸೊಗಸಾಗಿ ಕಾಣಿಸುತಿದ್ದ ಬಿಹಾರವು ಈಗ ಅಸತ್ಯವಾದಂತೆ ತೋರುತ್ತದೆ. ಪೂರ್ವಗ್ರಹದೂಷಿತ ಅಥವಾ ಅತಿಶಯೋಕ್ತಿಯ ವರದಿಗಳನ್ನು ನಾನು ಅವಲಂಬಿಸಿಲ್ಲ. ಕೇಂದ್ರ ಸರಕಾರದ ಮುಖ್ಯಮಂತ್ರಿ ಹಾಗೂ ಇನ್ನೋರ್ವ ಮಂತ್ರಿಗಳು ಅಲ್ಲಿ ಉಳಿದಿರುವದು ಬಿಹಾರದ ದುರ್ಘಟನೆಯನ್ನು ಸ್ಪಷ್ಟಪಡಿಸಿರುತ್ತದೆ. ಮುಸ್ಲಿಂಲೀಗ ಅಡಳಿತಕ್ಕೊಳಗಾದ ಬಂಗಾಲದಲ್ಲಿ ಇದಕ್ಕಿಂತ ಹೆಚ್ಚಿನ ದುರ್ಘಟನೆಗಳು ನಡೆದಿವೆಯೆಂದೂ ಬಿಹಾರದಘಟನೆಗಳು ಅವುಗಳ ಪ್ರತಿಕ್ರಿಯೆಯೆಂದೂ ನನಗೆ ಪ್ರತ್ಯುತ್ತರ ಕೊಡಬಹುದು. ಒಂದು ಪಕ್ಷದವರ ದುಷ್ಕೃತ್ಯಕ್ಕೆ ಪ್ರತಿಯಾಗಿ ಇದು ವರೆಗೆ ಸಚ್ಚಾರಿತ್ರ್ಯದಿಂದ ಕೂಡಿದ ವಿರೋಧಿ ಪಕ್ಷವು ದುಷ್ಕೃತ್ಯಕ್ಕೆ ಕೈಹಾಕುವದು ನ್ಯಾಯ್ಯವಾಗಲಾರದು. ನಾನುಕಲಕತ್ತೆಗೆ ಬಂದು ವಾರವಾದರೂ ಬಂಗಾಲ ದುರಂತದ ವಿಸ್ತಾರ ಇನ್ನೂ ತಿಳಿದಿಲ್ಲ. ಬಿಹಾರವು ನನ್ನನ್ನೀಗ ಕರೆದರೂ ಇಲ್ಲಿಯ ನನ್ನ ಕಾರ್ಯಕ್ರಮವನ್ನು ರದ್ದುಗೊಳಿಸಲಾರೆ. ಕಾಂಗ್ರೆಸ್ಸಿಗರು ಲೀಗಿನವರ ಮೇಲೆ ಹೊರಿಸುವ ಜಾತೀಯತೆಯ ಆರೋಪಕ್ಕೆ ಪ್ರತಿಜಾತ್ಯಂಧತೆಯು ಯೋಗ್ಯ ಉತ್ತರವೆ? ಬಿಹಾರದಲ್ಲಿ ನೂರಕ್ಕೆ ೧೪ ರಷ್ಟಿರುವ ಮುಸಲ್ಮಾನರನ್ನು ಕಾಡುತನದಿಂದ ಹಿಸುಕುವದು ರಾಷ್ಟ್ರೀಯತ್ವವೇ ?

ಕೆಲ ಸಹಸ್ರ ಬಿಹಾರಿಗಳು ಮಾಡಿದ ಪಾಪಕ್ಕೆ ಇಡೀ ಬಿಹಾರವನ್ನೇ ಶಪಿಸಬಾರದೆಂದು ನನಗೆ ಹೇಳಿಸಿಕೊಳ್ಳುವ ಅಗತ್ಯವಿಲ್ಲ. ಆದರೆ ಒಬ್ಬ ವ್ರಜ ಕಿಶೋರ ಅಥವಾ ಒಬ್ಬ ರಾಜೇಂದ್ರ ಪ್ರಸಾದನಿಗಾಗಿ ಇಡೀ ಬಿಹಾರವು ಹೆಮ್ಮೆ ಪಡುವದಿಲ್ಲವೆ? ಬಿಹಾರದಲ್ಲಿಯ ದುರ್ಘಟನೆಯು ಹಾಗೇ ಸಾಗಿದರೆ ಜಗತ್ತು ಹಿಂದುಸ್ತಾನದ ಎಲ್ಲ ಹಿಂದುಗಳನ್ನು ಖಂಡಿಸಬಹುದೆಂದು ನನಗೆ ಅಂಜಿಕೆಯಿದೆ. ಅದು ಜಗತ್ತಿನ ರೀತಿ; ಅದರಲ್ಲಿ ತಪ್ಪಿಲ್ಲ. ಕಾಂಗ್ರೆಸ್ಸಿನಲ್ಲಿ ಕೆಲ ಮುಸಲ್ಮಾನರು, ಶೀಖರು, ಕ್ರಿಶ್ಚಿಯನರು, ಪಾರ್ಶಿ ಮತ್ತು ಇನ್ನಿತರ ಜಾತಿಯವರಿದ್ದರೂ ಅದು ಹಿಂದೂ ಸಂಸ್ಥೆಯೆಂಬ ಜಿನ್ನಾರ ಅಣಕು ಬಿಹಾರ ಹಿಂದುಗಳ ವರ್ತನೆಯಿಂದ ಸತ್ಯವಾಗಿ ಪರಿಣಮಿಸಬಹುದು. ಅಲ್ಪಸಂಖ್ಯಾಕರಾದ ಮುಸಲ್ಮಾನರು ತಮ್ಮ ಬಂಧುಗಳೆಂದೂ ತಮ್ಮಷ್ಟೇ ರಕ್ಷಣೆ ಅವರಿಗೂ ಅವಶ್ಯವೆಂದೂ ಬಿಹಾರ ಹಿಂದುಗಳು ತಿಳಿದುಕೊಳ್ಳಲು ಗೌರವಬದ್ಧರಾಗಿರುವರು. ಕಾಂಗ್ರೆಸ ಪ್ರತಿಷ್ಠೆ ಬೆಳೆಸುವದಕ್ಕೆ ಮುಂದಾದ ಬಿಹಾರವು ಅದರ ಗೋರಿಯನ್ನು ತೋಡುವದಕ್ಕೂ ಮುಂದಾಗುವದು ಬೇಡ.

ನನ್ನ ಅಹಿಂಸೆಯ ಬಗ್ಗೆ ನನಗೆ ನಾಚಿಕೆಯಾಗುವದಿಲ್ಲ. ಆಯತ್ತ ಪ್ರಸಂಗದಲ್ಲಿ ಅಹಿಂಸೆಯ ಉಪಯೋಗವೆಷ್ಟಾದೀತೆಂಬದನ್ನು ಪರೀಕ್ಷಿಸಲು ನಾನೀಗ ಬಂಗಾಲಕ್ಕೆ ಬಂದಿರುವೆನು. ಈ ಪತ್ರದಲ್ಲಿ ನಿಮಗೂ ಅಹಿಂಸೆಯನ್ನು ಬೋಧಿಸಬಯಸುವದಿಲ್ಲ. ಆದರೆ ನೀವೆಸಗಿದವೆಂದುದು ಹೇಳಲಾಗುವ ಕೃತಿಗಳು ವೀರೋಚಿತವಾಗಲಾರವೆಂದು ತಿಳಿಸಬಯಸುವೆ. ಸಾವಿರಾರು ಜನರು ಸೇರಿ ನೂರಾರು ಜನರನ್ನು ಕೊಲ್ಲುವದು ಶೌರ್ಯವಾಗಲಾರದು. ಅದು ಹೇಡಿತನಕ್ಕಿಂತಲೂ ಹೀನ. ಯಾವದೇ ಧರ್ಮದ ರಾಷ್ಟ್ರೀಯತೆಗೆ ಅದು ಕುಂದು. ಪಟ್ಟಿಗೆಪೆಟ್ಟು ಹಾಕಿದ್ದರೆ ನಿಮ್ಮ ಕಡೆಗೆ ಯಾರೂ ಬೆರಳು ತೋರಿಸುತ್ತಿದ್ದಿಲ್ಲ. ಅದರೀಗ ನಿಮ್ಮ ಕೃತಿಗಳು ನಿಮ್ಮನ್ನೂ ಹಿಂದುಸ್ತಾನವನ್ನೂ ಅಧೋಗತಿಗಿಳಿಸಿ ಅವಮಾನಗೊಳಿಸುವವು.

"ನಿಮ್ಮ ಸೈನ್ಯವನ್ನು ಹಿಂತೆಗೆದುಕೊಂಡು ಹೋಗಿರಿ, ನೀವೂ ಮರಳಿ ಹೋಗಿ ನಿಮ್ಮ ಕೆಲಸ ಕೈಕೊಳ್ಳಿರಿ" ಎಂದು ನೀವು ಪಂಡಿತ ಜವಾಹರ ಲಾಲ, ಅಬ್ದುರ್ ರಾಬ ನಿಸ್ತಾರ ಸಾಹೇಬ ಮತ್ತು ಡಾ. ರಾಜೇಂದ್ರ ಪ್ರಸಾದರಿಗೆ ಹೇಳಬೇಕು. ಈಗಿನ ನಿಮ್ಮ ಅಮಾನುಷ ಕೃತಿಗಳಿಗೆ ನೀವು ಪಶ್ಚಾತ್ತಾಪಪಟ್ಟು, ಮುಸಲ್ಮಾನರನ್ನು ಸ್ವಂತ ಬಂಧುಭಗಿನಿಯರಂತೆ ರಕ್ಷಿಸುವದಾಗಿ ಆಶ್ವಾಸನ ಕೊಟ್ಟರೆ ಮಾತ್ರ ಇದು ಸಾಧ್ಯ.

ಈಗ ಆಶ್ರಯವಿಲ್ಲದೆ ಓಡಿ ಹೋದ ಪ್ರತಿಯೊಬ್ಬ ಮುಸಲ್ಮಾನನು ಪುನಃ ತನ್ನ ಮನೆಗೆ ಬರುವವರೆಗೆ ಅವನ ಮನೆ ನಾಶವಾಗಿದ್ದರೆ ಅದನ್ನು ಮಂತ್ರಿಗಳ ಸಹಾಯದಿಂದ ಕಟ್ಟಿಕೊಡುವವರೆಗೆ, ನೀವು ಸ್ವಸ್ಥ ಕುಳಿತುಕೊಳ್ಳತಕ್ಕದ್ದಲ್ಲ. ಟೀಕಾಕಾರರು ನಿಮ್ಮ ಮಂತ್ರಿಗಳನ್ನು ಹೇಗೆ ಜರಿದಿದ್ದಾರೆಂಬದು ನಿಮಗೆ ಗೊತ್ತಿಲ್ಲ.

ನಾನೂ ನಿಮ್ಮವರಲ್ಲೊಬ್ಬ, ನನ್ನ ಮೇಲಿದ್ದ ನಿಮ್ಮ ಪ್ರೀತಿಯೇ ಈ ನಿಷ್ಠೆಯನ್ನು ಕಲ್ಪಿಸಿದೆ. ಆದುದರಿಂದ ನಾನು ಸ್ವಲ್ಪ ಪ್ರಾಯಶ್ಚಿತ್ತ ತೆಗೆದುಕೊಂಡ ಹೊರ್ತು ಶಾಂತಿ ಲಭಿಸುವದಿಲ್ಲ. ನಾನು ಕಲಕತ್ತೆಗೆ ಬಂದಕೂಡಲೇ ಆರೋಗ್ಯದ ನಿಮಿತ್ತ ಅತ್ಯಲ್ಪ ಆಹಾರದ ಮೇಲಿರುವೆ. ಈಗ ಬಿಹಾರದ ಅತ್ಯಾಚಾರದ ನಿಮಿತ್ತ ಆ ಅತ್ಯಲ್ಪ ಆಹಾರವನ್ನು ಪ್ರಾಯಶ್ಚಿತ್ತವೆಂದು ಸಾಗಿಸಿದ್ದೇನೆ. ತಪ್ಪಿತಸ್ಥ ಬಿಹಾರಿಗಳು ಸುಧಾರಿಸದಿದ್ದರೆ ಈ ವ್ರತವು ಅಮರಣ ಉಪವಾಸದಲ್ಲಿ ಪರಿಣಮಿಸುವದು.

ಪವಿತ್ರ ಕರ್ತವ್ಯವೆಂದು ಕೈಕೊಂಡ ಈ ಪ್ರಾಯಶ್ಚಿತ್ತದ ಬಗ್ಗೆ ಬಿಹಾರಿಗಳು ಅನ್ಯಥಾ ಭಾವಿಸಲಾರರು.

ನನಗೆ ಸಹಾನುಭೂತಿ ತೋರಿಸಲು ಅಥವಾ ಸಹಾಯ ನೀಡಲು ಮಿತ್ರರಾರೂ ಇಲ್ಲಿಯವರೆಗೆ ಧಾವಿಸಿ ಬರತಕ್ಕದ್ದಲ್ಲ. ಈಗ ನನ್ನ ಸುತ್ತಲೂ ನೆಚ್ಚಿನ ಗೆಳೆಯರು ಅನೇಕರಿದ್ದಾರೆ. ಅಲ್ಲದೆ ನನ್ನನ್ನನುಕರಿಸುವದು ಸಹ ಶುದ್ಧ ತಪ್ಪು. ಸಹಾನುಭೂತಿಪರ ಉಪವಾಸಗಳು ಅಥವಾ ಅರೆ ಉಪವಾಸಗಳು ಅವಶ್ಯವಿಲ್ಲ. ಅವುಗಳಿಂದ ಅಪಾಯಮಾತ್ರ ಉಂಟಾಗುವದು. ನನ್ನನ್ನರಿತವರ ಹಾಗೂ ವಿಶ್ವಾಸವಿದ್ದವರ ಅಂತರಾತ್ಮನನ್ನು ಕಾರ್ಯ ಪ್ರವೃತ್ತಗೊಳಿಸುವದೇ ನನ್ನ ಪ್ರಾಯಶ್ಚಿತ್ತದ ಉದ್ದೇಶ. ನನ್ನ ವಿಷಯವಾಗಿ ಯಾರೂ ಕಾತರರಾಗಬೇಕಿಲ್ಲ. ಪರಮಾತ್ಮನ ರಕ್ಷಣೆಯಲ್ಲಿ ನಾನೂ ನಿಮ್ಮಂತೆ ಇದ್ದೇನೆ. ಈ ಜಡದೇಹದ ಮೂಲಕವೇ ನನ್ನ ಸೇವೆ ದೇವರಿಗೆ ಬೇಕಾಗಿರುವ ವರೆಗೆ ನನಗೆ ಏನೂ ಆಗಲಾರದು."

ಕಲಕತ್ತೆ, ೬-೧೧-೪೬ — ತಮ್ಮ ಅಡಿಯಾಳು, ಮೋ. ಕ. ಗಾಂಧಿ

## ಟೀಕಟಿಪ್ಪಣಿಗಳು

### ಅಪಹೃತ ಕನ್ಯೆಯರು

ಪ್ರಶ್ನೆ:— ಒತ್ತಾಯದಿಂದ ಅಪಹರಿಸಲ್ಪಟ್ಟ ಕನ್ಯೆಯರು ಯಾವದೇ ಬಗೆಯ ಅಪರಾಧ ಮಾಡಿದಂತಾಗಲಿಲ್ಲಾದ್ದರಿಂದ ಸಮಾಜವು ಅವರನ್ನು ದಂಡಿಸಕೂಡದೆಂದು ನೀವು ಜನತೆಯ ಲಕ್ಷವನ್ನು ಎಳೆದಿರುವಿರಿ. ಇದನ್ನೆ ಸ್ವಲ್ಪ ಮುಂದರಿಸಿ ಒತ್ತಾಯದಿಂದ ಮನಸಿಲ್ಲದೆ ಮದುವೆಯ ಸಂಸ್ಕಾರಕ್ಕೆ ಗುರಿಯಾದ ಕನ್ಯೆಯರಿಗೆ ಅದು ಬಂಧನಕಾರಕವಾಗುವದೊ ಹೇಗೆಂಬುದನ್ನು ದಯವಿಟ್ಟು ವಿವರಿಸುವಿರಾ? ಇಂಥ ಕನ್ಯೆಯರನ್ನು ಮರಳಿ ತೆಗೆದುಕೊಳ್ಳುವಷ್ಟು ಉದಾರ ಮನಸ್ಸನ್ನು ಸಮಾಜ ಮತ್ತು ಕುಟುಂಬ ತಳೆಯುವದು ನ್ಯಾಯ್ಯವಾಗಿಲ್ಲವೆ? ಅಪಹೃತ ಇಲ್ಲವೆ ಒತ್ತಾಯದಿಂದ ಲಗ್ನ ಸಂಸ್ಕಾರ ಮಾಡಲ್ಪಟ್ಟ ಅವಿವಾಹಿತ ಕನ್ಯೆಯರನ್ನು ಮರಳಿ ಸಮಾಜದಲ್ಲಿ ತೆಗೆದುಕೊಳ್ಳುವದಕ್ಕಷ್ಟೇ ಅಲ್ಲ ಆದರೆ ಅವರ ಮದುವೆಯನ್ನು ಮಾಡಿ ಪೂರ್ಣವಾಗಿ ಅವರನ್ನು ಆ ಸಮಾಜದಲ್ಲಿ ತೆಗೆದುಕೊಳ್ಳುವದಕ್ಕಾಗಿ ವಿಶೇಷ ಪ್ರಯತ್ನ ಮಾಡುವದು ಸಮಾಜದ ಕರ್ತವ್ಯವಾಗಿಲ್ಲವೆ?

ಉತ್ತರಃ— ನೀವು ಹೇಳುವದು ಯೋಗ್ಯವಾಗಿದೆ. ನೀವು ಉಲ್ಲೇಖಿಸಿದ ನನ್ನ ಅಭಿಪ್ರಾಯ ನೀವು ಹೇಳುವದನ್ನೆಲ್ಲ ಅಳವಡಿಸಿಕೊಳ್ಳುತ್ತದೆ. ಒತ್ತಾಯದಿಂದ ಅಪಹರಿಸಲ್ಪಟ್ಟ ಕನ್ಯೆಯರು ಯಾವದೇ ಬಗೆಯ ಅಪರಾಧ ಮಾಡಿಲ್ಲ. ಅಪ್ರೀತಿಗೆ ಗುರಿಯಾಗಿರುವದಿಲ್ಲ. ಸಮಂಜಸ ಮನುಷ್ಯರೆಲ್ಲರ ಕೃಪೆ ಮತ್ತು ಸಹಾಯಕ್ಕೆ ಅವರು ಪಾತ್ರರಾಗಿರುವರು. ಇಂಥ ಹುಡಿಗೆಯರನ್ನು ಅವರ ಮನೆಯವರು ಸಂತೋಷದಿಂದ ಪ್ರೀತಿಯಿಂದ ಬರಮಾಡಿಕೊಳ್ಳಬೇಕು. ಇವರಿಗೆ ಯೋಗ್ಯ ವರನಗೂಡ ಲಗ್ನ ಮಾಡುವಲ್ಲಿಯೂ ಯಾವದೇ ಬಗೆಯ ಅಡಚಣೆ ಬರಲಾರದು.

ಹೊಸದಿಲ್ಲಿ, ೨೫—೧೦—೪೬ — ಮೋ. ಕ. ಗಾಂಧಿ

### ದೋಲಾ--ಪಲ್ಲಕ್ಕಿ

ಆಕ್ಷೇಪಕರು ಹಿಂದಿನ ರೂಢಿ ಪರಿಪಾಠಿಯನ್ನು ತೋರಿಸಿದರೂ ಅದನ್ನು ಲೆಕ್ಕಿಸದೆ ಹರಿಜನ ವರನ ಮೆರವಣಿಗೆ ಕುದುರೆಯ ಮೇಲೆ ಹೊರಡಿಸಿದಕ್ಕೆ ಇಲ್ಲವೆ ಬೇರೆ ಯಾವದೇ ಬಗೆಯ ವಾಹನವನ್ನುಪಯೋಗಿಸಲಿಕ್ಕೆ ಅವನಿಗೆಯಾರಾದರೂ ಅಡ್ಡಿ ಮಾಡಿದರೆ ಅವರಮೇಲೆ ಕೂಡಲೆ ಕ್ರಮ ತೆಗೆದುಕೊಳ್ಳುವುದಾಗಿ ಸಂಯುಕ್ತಪ್ರಾಂತ ಸರಕಾರದವರು ಹುಕುಮು ಹೊರಡಿಸಿರುವರೆಂದು ತಿಳಿದು ಬಂದದ್ದರಿಂದ ಘಾರವಾಲದಲ್ಲಿಯ ದೋಲಾ ಪಲ್ಲಕ್ಕಿಯ ವ್ಯಾಜ್ಯವನ್ನು ನಿಲ್ಲಿಸಿಬಿಡಬೇಕು.

ಕಲಕತ್ತೆಯ ಗಾಡಿಯಲ್ಲಿ, ೨೯—೧೦—೧೯೪೬ — ಮೋ. ಕ. ಗಾಂಧಿ

### ಮೂಕ ಪ್ರಾಣಿಗಳ ಛಲನೆ

ಬೆಂಗಳೂರ ನಗರದ ಜಲಾಶಯದಲ್ಲಿಡಲ್ಪಟ್ಟ ದುರ್ದೈವೀ ನಾಯಿಗಳ ಮತ್ತು ಇತರ ಪ್ರಾಣಿಗಳತ್ತ ಮೈಸೂರಿನವರೊಬ್ಬರು ನನ್ನ ಲಕ್ಷವನ್ನು ಸೆಳೆದಿದ್ದಾರೆ. ಇದು ತೀರ ಕ್ಷುಲ್ಲಕ ಮಾತಾಗಿದ್ದರೂ ನಿಜವಾಗಿ ಆ ಪ್ರಾಣಿಗಳಿಗೆ ಜೀವನಮರಣದ ಪ್ರಶ್ನೆಯಾಗಿದೆ. ಅಲ್ಲಿನ ಪರಿಸ್ಥಿತಿ ತೀರ ಶೋಚನೀಯವಾಗಿದೆ. ಯಾವದೇ ಬಗೆಯ ಅಪರಾಧ ಮಾಡಿರದಿದ್ದರೂ ಆ ಬಡಪ್ರಾಣಿಗಳನ್ನು ಸೆರೆಯಲ್ಲಿಡಲಾಗಿದೆ. ಅವುಗಳಿಗೆ ಯೋಗ್ಯ ಆಹಾರ ಮತ್ತು ನೀರು ಕೊಡಲಾಗುವದಿಲ್ಲ. ನಾಯಿಗಳನ್ನು ಕೊಲ್ಲುವ ಹಿಂದಿನ ಸಾಧನವೀಗ ಹಳೆಯದೆನಿಸುತಿದ್ದು ಅದರ ಬದಲು ಬೇರೆ ಯಾವ ಹಂಚಿಕೆಯನ್ನೂ ಹುಡುಕಿಲ್ಲ. ಪ್ರಾಣಿಗೆ ವಿಷ ಹಾಕಿ ಕೊಲ್ಲುವ ಗ್ರಾಮ್ಯ ಮತ್ತು ಕಠೋರ ಪದ್ಧತಿಯನ್ನೆ ಇನ್ನು ಅವಲಂಬಿಸಲಾಗುತ್ತದೆ. ಬಿಡಾಡಿನಾಯಿಗಳನ್ನು ಕೊಲ್ಲಿರೆಂದು ಉಪದೇಶಿಸುವ ದುರ್ದೈವ ನನ್ನದಾಗಿತ್ತು. ಕರುಣೆಯ ತಪ್ಪು ತಿಳುವಳಿಕೆಯಿಂದ ಜನರು ಬಹಿಷ್ಕೃತ ನಾಯಿಗಳಿಗೆ ಅನ್ನ ಹಾಕಿ ಪೆರೆಹೊರೆಯವರಿಗೆ ತೊಂದರೆ ಕೊಡುವ ಅವಕಾಶ ಒದಗಿಸಿಕೊಡುವ ನಿಷ್ಠುರತೆಯನ್ನೆ ತಳೆದದ್ದರಿಂದ ನನಗೆ ಹಾಗೆ ಹೇಳದೆ ಬೇರೆ ಮಾರ್ಗವಿರಲಿಲ್ಲ. ಆದರೆ ಇಂಥ ನಾಯಿಗಳನ್ನು ಬಂಧನದಲ್ಲಿಡಬೇಕೆಂದು ನನ್ನ ಸಲಹೆಯ ಅರ್ಥವೆಂದೂ ಇರಲಿಲ್ಲ. ಮತ್ತು ಈ ಸುದ್ದಿಗಾರರು ಹೇಳುವ ರೀತಿಯಲ್ಲಿ ಅವುಗಳನ್ನು ಛಲಿಸಬೇಕೆಂದೂ ಅದರ ಅರ್ಥವಾಗಿರಲಿಲ್ಲ-ಕೂಡಲೆ ಮತ್ತು ನೋವಾಗದಂತೆ ಇಂಥ ಪ್ರಾಣಿಗಳನ್ನು ಕೊಲ್ಲಬೇಕಾದುದು ಮಾನವೀಯತೆ. ಈ ಸುದ್ದಿಗಾರನು ಹೇಳಿದ್ದು ಅತಿಶಯೋಕ್ತಿಯಾಗಿರಲೆಂದು ನಾನು ಆಶಿಸುತ್ತೇನೆ. ಏನೇ ಇದ್ದರೂ ಆ ಮುನಸಿಪಾಲಿಟಿಯವರು ಮತ್ತು ಅಂಥ ಉಳಿದ ಸಂಸ್ಥೆಯವರು ಈ ಸಂಬಂಧದಲ್ಲಿ ಮಾನವ್ಯದ ಒರೆಗಲ್ಲಿಗೆ ಹತ್ತದಿದ್ದರೆ ತಮ್ಮ ರೀತಿಯನ್ನು ತಿದ್ದಿಕೊಳ್ಳಬೇಕಾಗಿದೆ.

ಕಲಕತ್ತೆಯ ಗಾಡಿಯಲ್ಲಿ, ೨೯-೧೦-೧೯೪೬ — ಮೋ. ಕ. ಗಾಂಧಿ

### ಒಡೆದು ಕಾಣುವ ಅಂಕಿ ಸಂಖ್ಯೆಗಳು

ಪ್ರಾಂತಿಕ ಜವಳಿ ಕಮೀಶನರರಾದ ಶ್ರೀ ಎಸ್ ವೆಂಕಟೇಶ್ವರನ್‌ರವರು ಮದ್ರಾಸ ಖಾದಿ ಯೋಜನೆಯ ವಿಷಯದಲ್ಲಿ ಚರ್ಚಿಸಲೆಂದೇ ದಿಲ್ಲಿಗೆ ಬಂದಿದ್ದರು. ಮದ್ರಾಸದಲ್ಲಿ ಜವಳೀ ಗಿರಣಿಗಳಿಲ್ಲ. ಇಡೀ ಪ್ರಾಂತದ ಜನತೆಗೆ ಖಾದಿಯನ್ನೇ ಪೂರೈಸುವದಿದೆ ಎಂದು ತಿಳಿದು ನಿಮ್ಮ ಅಂಕಿ ಸಂಖ್ಯೆಗಳನ್ನು ಕೊಡಿರಿ ಎಂದು ನಾನು ಅಗ ಅವರಿಗೆ ಹೇಳಿದೆ.

ಇಲ್ಲಿ ಅವರು ಕೊಟ್ಟ ಅಂಕಿ ಸಂಖ್ಯೆಗಳಿವೆ.

ಮದ್ರಾಸ ಪ್ರಾಂತದ ಜನಸಂಖ್ಯೆ ೫೩೦ ಲಕ್ಷ.

ಪ್ರಾಂತದಲ್ಲಿರುವ ಕುಟುಂಬಗಳ ಸಂಖ್ಯೆ (೪ ಜನರಿಗೆ ಒಂದು ಕುಟುಂಬ) ೧೩೨·೫ ಲಕ್ಷ

ದಿನಕ್ಕೊಂದು ತಾಸಿನಂತೆನೂಲುತೆಗೆದರೆ ಪ್ರತಿಯೊಬ್ಬನು ತೆಗೆಯಬಹುದಾದ ಕೈ ನೂಲು. ⅜ ಲಡಿ.

ತಿಂಗಳಿಗೆ ೩೦ ದಿವಸ ಕೆಲಸಮಾಡಿ ಒಂದು ಕುಟುಂಬವು ಒಟ್ಟು ತೆಗೆಯುವ ನೂಲು. (ಪ್ರತಿಯೊಂದು ಕುಟುಂಬದಲ್ಲಿ ಒಬ್ಬರೇ ನೂಲುವರೆಂದು ತಿಳಿದರೆ) ⅜×೩೦=೧೧·೨ ಲಡಿ.

ಪ್ರತಿಯೊಂದು ಕುಟುಂಬದಿಂದ ಒಂದು ವರ್ಷಕ್ಕೆ ತಯಾರಾಗುವ ಕೈನೂಲು ೧೨×೧೧ =೧೩೫ ಲಡಿ.

ಸರಾಸರಿ ನೂಲಿನ ನಂಬರು ೧೪ ಎಂದು ತಿಳಿದರೆ ಒಟ್ಟು ನೂಲಿನ ತೂಕ. ೯·೬೪ ಪೌಂಡ. ಅಥವಾ ಸರಾಸರಿ ೧೦ ಪೌಂಡು ಸರಾಸರಿ ೪೫ ಇಂಚು ಅಗಲಿನ ೩೦ ವಾರ ಬಟ್ಟೆಯಾಗುವದು.

ಪ್ರಾಂತದಲ್ಲಿ ಒಟ್ಟು ಖಾದಿ ಉತ್ಪತ್ತಿ ೩೦×೧೩೨·೫ಲಕ್ಷ=೩೯೭೫. ಲಕ್ಷ

ಇಡೀ ಜನಸಂಖ್ಯೆಗೆ ಬೇಕಾಗುವ ಬಟ್ಟೆ.

ಮಕ್ಕಳಿಗೆ ೧೦ ಗಜದಂತೆ ೧೬೦×೧೦=೧೬೦೦

ದೊಡ್ಡವರಿಗೆ ೨೦ಗಜದಂತೆ ೩೭೦×೨೦=೭೪೦೦

೯೦೦೦ ಲಕ್ಷ ಗಜ.

ಬಟ್ಟೆಯ ಬೇಡಿಕೆಯಲ್ಲಿ ನೂರಕ್ಕೆ ಎಷ್ಟು ಪ್ರಮಾಣದಲ್ಲಿ ಖಾದಿ ಉತ್ಪತ್ತಿ ಆಗಬಹುದು. ೪೪·೧./·

ಇದರಿಂದ ಇಡೀ ಪ್ರಾಂತಕ್ಕೆ ಬೇಕಾಗುವ ಬಟ್ಟೆಯ ಉತ್ಪತ್ತಿಗೆ ಸಾಕಷ್ಟು ಸಿಗಬೇಕಾದರೆ ಪ್ರತಿಯೊಂದು ಕುಟುಂಬದಿಂದ ಒಬ್ಬನ ಸರಾಸರಿ ನೂಲುವ ಕೆಲಸ ದಿನಕ್ಕೆ ೨॥ ತಾಸು ಗಳದ್ದಾಗಬೇಕು, ಇಲ್ಲವೆ ಎರಡು ಕುಟುಂಬಗಳಲ್ಲಿ ಕೂಡಿ ೫ ಜನರಾದರೂ ದಿನಾಲು ಸರಾಸರಿ ೧ ತಾಸು ನೂಲುವ ಕೆಲಸ ಮಾಡುವವರು ಸಿಗಬೇಕು. ಸಾಧ್ಯವಿಲ್ಲದೆ ಹೋದರೆ ಜನರಿಗೆ ಸಾಕಷ್ಟು ಬಟ್ಟೆ ದೊರೆಯಲಾರದೆಂದೆನಿಸಬಹುದು.

ಎಷ್ಟು ಕೈಮಗ್ಗಗಳು ಬೇಕಾಗಬಹುದು— ಒಬ್ಬ ನೇಕಾರನು ಸರಾಸರಿ ದಿನಕ್ಕೆ ೫ ಗಜಕ್ಕಿಂತ ಹೆಚ್ಚಿಗೆ ನೇಯಲಾರನೆಂದು ತಿಳಿದು ಲೆಕ್ಕ ಹಾಕಿದರೆ, ತಿಂಗಳಿಗೆ ಹಬ್ಬ, ಹುಣ್ಣಿವೆ, ವಿಶ್ರಾಂತಿಗಳಿಗಾಗಿ ೫ ದಿವಸ ಕೆಲಸಕ್ಕೆ ರಜೆ ಎಂದು ತಿಳಿ

—೧೧ನೇ ಪುಟಕ್ಕೆ

# ಮಧ್ಯ ಹಿಂದುಸ್ಥಾನದಲ್ಲಿ
## ೧೯೪೪-೪೫ ರಲ್ಲಿ ಹರಿಜನ ಕಾರ್ಯ

ಹರಿಜನ ಕಾರ್ಯದ ಮಟ್ಟಿಗೆ ಹೇಳುವುದಾದರೆ ಮಧ್ಯ ಹಿಂದುಸ್ಥಾನದಲ್ಲಿ ಸಂಸ್ಥಾನಾಧೀಶರಿದ್ದುದು ಅಪವಾದವೆಂದಾದರೂ ಸುದೈವವೆಂದು ಹೇಳಬಹುದು. ಅವರಲ್ಲಿ ಮೂವರಾದರೂ— ಇಂದೂರಿನ ಯಶವಂತರಾವ ಮಹಾರಾಜರು, ಗ್ವಾಲ್ಹೇರದ ಮಹಾರಾಜಾ ಜೀವಾಜಿರಾವ ಶಿಂಧೆಯವರು ಮತ್ತು ರೇವಾದ ಮಹಾರಾಜಾ ಗುಲಾಬಸಿಂಗರು ಹರಿಜನರ ಹಕ್ಕುಬಾಧ್ಯತೆಗಳ ಸಂಬಂಧದಲ್ಲಿ ಘೋಷಣೆ ಹೊರಡಿಸಿರುವರು. ಗಾಲ್ಹೇರ ಮಹಾರಾಜರು ಕಳೆದ ವರ್ಷ ಮೇ ೪ ಕ್ಕೆ ಘೋಷಣೆ ಹೊರಡಿಸಿದರು. ಈ ಮೂರು ಸಂಸ್ಥಾನಗಳಲ್ಲಿಯೆ ೭೦ ಲಕ್ಷ ಜನಸಂಖ್ಯೆಯಿದೆ. ಮತ್ತು ೫೦ ಸಾವಿರ ಚದುರು ಮೈಲು ಪ್ರದೇಶವಿದೆ. ಮಧ್ಯ ಹಿಂದುಸ್ಥಾನ ಕಾಠೇವಾಡಕ್ಕಿಂತ ಹೆಚ್ಚು ಪ್ರಗತಿಪರವಾಗಿದೆ. ಕಾಠೇವಾಡದಲ್ಲಿ ಲಾಠಿ ಸಂಸ್ಥಾನದಲ್ಲಿ ಮಾತ್ರ ಈ ಬಗೆಯ ಘೋಷಣೆ ಮಾಡಲಾಗಿದೆ. ಉಳಿದ ಸಂಸ್ಥಾನಗಳೂ ೧೯೪೬ ರಲ್ಲಿಯಾದರೂ ಇಂಥ ಹುಕುಮು ಹೊರಡಿಸುವದು ತಮ್ಮ ವರ್ಚಸ್ಸಿಗೆ ಅವಮಾನಕರವೆಂದು ತಿಳಿಯದೆ ಸಣ್ಣ ಲಾಠಿ ಸಂಸ್ಥಾನ ಹಾಕಿ ಕೊಟ್ಟ ಉದಾಹರಣೆಯನ್ನು ತೀಡುವ ಔದಾರ್ಯವನ್ನು ತೋರಿಸುವವೆಂದು ಆಶಿಸಬಹುದೊ?

೧೯೪೫ ಮಾರ್ಚ ೧ ನೇ ತಾರೀಕು ಹರಿಜನ ಸಂಘದ ಇಂದೂರ ಶಾಖೆಯವರು ಹರಿಜನ ದಿನಾಚರಣೆ ಮಾಡಿದರು. ಆಗ ಹರಿಜನರಿಗೆ ಗುಡಿಗಳು ಮತ್ತು ಹಿಂದೂ ಉಪಹಾರಗೃಹಗಳು ಮುಕ್ತದ್ವಾರವಾದವು. ಹರಿಜನರನ್ನೊಳಗೊಂಡ ಎಲ್ಲ ಕೆಲಸಗಾರರ ಸಲುವಾಗಿ ಮನೆಗಳನ್ನು ಕಟ್ಟಲು ತಮ್ಮ ಲಾಭದಲ್ಲಿ ನೂರಕ್ಕೆ ೫ ರಷ್ಟು ಹಣವನ್ನು ವ್ಯಯ ಮಾಡುವದಾಗಿ ರಾಯಬಹಾದ್ದೂರ ಸೇಠ ಹಿರಾಲಾಲಜಿಯವರು ಗಿರಣಿಗಾರರ ಪರವಾಗಿ ಸಾರಿದರು. ಮುಂದಿನ ವರದಿ ಹೊರಬೀಳುವದರೊಳಗಾಗಿ ಈ ೭೫ ಸಾವಿರ ರೂಪಾಯಿಗಳೆಲ್ಲ ಕಟ್ಟಡ ಕಟ್ಟುವಿಕೆಯಲ್ಲಿ ವ್ಯಯ ಮಾಡಲ್ಪಡುವವೆಂದು ಆಶಿಸುವಾ. ಹರಿಜನ ವಸತಿಗಾಗಿ ೨೫೦ ಬಿಘೆ ಭೂಮಿಯನ್ನು ಪಡೆದದ್ದಾಗಿದೆ. ಈ ಶಾಖೆಯವರು ಕೈಕಾಗದ ಕಾರಖಾನೆಯೊಂದನ್ನು ಹೊರಡಿಸಿದ್ದು ಅನೇಕ ಹರಿಜನ ಕುಟುಂಬದವರನ್ನು ಅದರಲ್ಲಿ ಕೆಲಸಕ್ಕೆ ಇಟ್ಟುಕೊಂಡಿರುವರು. ಈಗ ಪರಿಶೀಲನೆಯಲ್ಲಿರುವ ವರದಿಯು ಇಂದೂರಿನಲ್ಲಿ ತಯಾರಾದ ಕಾಗದದಲ್ಲಿಯೆ ಮುದ್ರಿತವಾದುದು ಯೋಗ್ಯವೆ ಸರಿ. ಹರಿಜನರು ನಡೆಸುತ್ತಿರುವ ಎರಡು ಹೊಸ ಮಾದರಿಯ ಎಣ್ಣೆ ಗಾಣಗಳನ್ನು ಸಂಘದವರು ಹಾಕಿದ್ದಾರೆ. ರದ್ದಿ ಕಾಗದ ಸಹಜವಾಗಿ ಸಿಕ್ಕುವ ಸ್ಥಳಗಳಲ್ಲೆಲ್ಲ ಕೈಕಾಗದ ಕಾರಖಾನೆ ಹೊರಡುವದುಚಿತ. ಸಣ್ಣ ದೊಡ್ಡ ಎಲ್ಲ ಸ್ಥಳಗಳಲ್ಲಿ ಶುದ್ಧ ಎಣ್ಣೆಯ ಗಾಣಗಳು ಇದ್ದೇ ತೀರಬೇಕಾದುದು ಅವಶ್ಯವಾಗಿದೆ.

ಉಜ್ಜಯಿನಿಯಲ್ಲಿ ಸಿಂಹ ಮೇಳೆ ಕೂಡಿದಾಗ ಗ್ವಾಲೇರ ಶಾಖೆಯವರು ಯೋಗ್ಯ ದಿಸೆಯಲ್ಲಿ ಪ್ರಚಾರ ಕಾರ್ಯ ಮಾಡಿದರು ಅಯೋಧ್ಯೆಯ ಹನುಮಾನ ಪೀಠದ ಆಚಾರ್ಯ ಜಾನಕೀದಾಸಜಿ ಮೊದಲಾದ ಸಾಧುಗಳಿಂದ ಒಳ್ಳೆ ಬೆಂಬಲ ದೊರೆಯಿತು. ಕಳೆದ ವರ್ಷ ರಾಜಕಾರಣದಲ್ಲಿ ರಾಜಕೀಯ ಕಾರ್ಯಕ್ಕೆಳಸಿದ್ದ ಶ್ರೀ ಕೃಷ್ಣದಾಸ ದಾತೆಯವರು ತಮ್ಮ ಪ್ರೀತಿಯ ಮೊದಲಿನ ಹರಿಜನ ಕಾರ್ಯ ಮಾಡಹತ್ತಿರುವರು. ಅವರಿಗೆ ಸಮರ್ಪಿಸಿದ ನಿಧಿಯ ಉಪಯೋಗವನ್ನು ಅವರು ಈ ಕಾರ್ಯಕ್ಕಾಗಿ ಮಾಡಹತ್ತಿದರು.

ಲಾಲಾ ಮುಲ್ಕಾಜಿ ಮತ್ತು ಶ್ರೀ ಮೆಹನಾತ ಇವರ ನೇತೃತ್ವದಲ್ಲಿ ಕಾರ್ಯ ಮಾಡುತಿರುವ ಭೋಪಾಳ ಶಾಖೆಯವರು ಮಧ್ಯ ಹಿಂದುಸ್ಥಾನ ಸಂಸ್ಥೆಯ ಧನಸಹಾಯವನ್ನಪೇಕ್ಷಿಸದೆ ಸ್ವತಂತ್ರವಾಗಿ ಹಣ ಸಂಗ್ರಹಿಸಿ ವ್ಯಯಮಾಡುತಿರುವರು.

ಬದ್ವಾನಿ ಸಂಸ್ಥಾನದವರು ಸಾರ್ವಜನಿಕ ಸಾಲೆ ಮತ್ತು ಬಾವಿಗಳೆಲ್ಲ ಹರಿಜನರಿಗೆ ಮುಕ್ತವಿರುವವೆಂದು ಸಾರಿರುವರು. ಇದೀಗ ಆ ಘೋಷಣೆಯನ್ನು ಪ್ರತ್ಯಕ್ಷಕೃತಿಯಲ್ಲಿ ತರುವ ಕ್ರಮವನ್ನು ಕೈಕೊಳ್ಳುವರೆಂದು ಆಶಿಸಲಾಗಿದೆ. ಸಾರ್ವಜನಿಕ ಮೋಟರ ಬಸ್ಸುಗಳಲ್ಲಿ ಮಹತಾರ ಮತ್ತು ಬಸೂರ ಜನರಿಗೆ ಸಂಚರಿಸುವ ಹಕ್ಕನ್ನು ಉಪಯೋಗಿಸುವ ಅನುಕೂಲತೆ ಮಾಡಿಕೊಡುವತ್ತ ಖಾನಾ ಮತ್ತು ಅಜಯಗಡ ಅಧಿಕಾರಿಗಳು ಗಮನಿಸಬೇಕು. ಹರಿಜನ ಸ್ತ್ರೀ ಕೆಲಸಗಾರರಿಗೆ ಹೆರಿಗೆ ರಜೆ ಕೊಡುವ ವ್ಯವಸ್ಥೆಯನ್ನು ಅಜಯಗಡ, ಬಿಜಾವರ ಮತ್ತು ಚರಖಾರಿ ಸಂಸ್ಥಾನದವರು ಇನ್ನೂ ಮಾಡಿಕೊಡಬೇಕಾಗಿದೆ.

ಟಿಕಮುಗಡದಲ್ಲಿ ಸವರ್ಣ ಹಿಂದು ಮತ್ತು ಹರಿಜನರ ಸಮ್ಮಿಶ್ರ ಭೋಜನವೇರ್ಪಡಿಸಲಾಗಿತ್ತು.

ಕೊನೆಯ ಮಾತನ್ನು ಹೇಳಿ ಈ ವಿಮರ್ಶೆಯನ್ನು ಮುಗಿಸುತ್ತೇವೆ. ಹರಿಜನರಿಗೆ ಸಾಲೆ, ವಸತಿ ಗೃಹ, ಶಿಷ್ಯವೃತ್ತಿ ಮತ್ತು ವೈದ್ಯಕೀಯ ಸಹಾಯವೆಂದು ವೆಚ್ಚ ಮಾಡಲ್ಪಟ್ಟ ೧೧ ಸಾವಿರ ರೂಪಾಯಿಗಳಲ್ಲಿ ೬೦೦೦ ರೂಪಾಯಿಗಳಷ್ಟು ಹಣ ಆಡಳಿತ ಮತ್ತು ಪ್ರಚಾರ ಕಾರ್ಯದಲ್ಲಿ ವ್ಯಯವಾಯಿತೆಂದು ಈ ವರದಿಯಲ್ಲಿಯ ಲೆಕ್ಕ ಪತ್ರಗಳಿಂದ ಗೊತ್ತಾಗುವದು. ವರ್ಷವರ್ಷಕ್ಕೆ ಈ ಅಂಕಿ ತಿರುವುಮುರುವಾಗಿ ಮೊದಲಿನ ಅಂಕಿ ಹೆಚ್ಚಿ ಎರಡನೆಯದು ಕಡಮೆಯಾಗುವಂತೆ ನೋಡಿಕೊಳ್ಳುವದು ನಮ್ಮ ಗುರಿಯಾಗಿರತಕ್ಕದ್ದು.

ವಿ. ಜಿ. ದೇ

# ಮಿತ್ರತ್ವದ ಪ್ರಸ್ತಾವ

"ವಿದ್ಯಮಾನಗಳನ್ನು ಹತ್ತಿಕ್ಕುವದು ಮತ್ತು ಕಟ್ಟುಕತೆಗಳನ್ನು ಹರಡುವದು ಈ ಎರಡು ಕೇಡುಗಳಿಗೆ ನಾವಿಂದು ಈಡಾಗಿದ್ದೇವೆ." ಎಂದು ಮಹಾತ್ಮರು ತಮ್ಮನ್ನು ಹೊಸದಿಲ್ಲಿಯಲ್ಲಿ ಭೆಟ್ಟಿಯಾಗಲಿಕ್ಕೆ ಬಂದಿದ್ದ ವರ್ಚಸ್ವಿ ಬ್ರಿಟಿಶ ದಿನಪತ್ರಿಕೆಯ ನಿರ್ದೇಶಕರೊಬ್ಬರಿಗೆ ಹೇಳಿದರು. ಭಾರತಕ್ಕೆ ಉಪಕಾರ ಮಾಡುವ ಇಚ್ಛೆ ತಮಗಿದೆಯೆಂದು ಅವರು ಹೇಳಿದರು.

"ದಂಗೆಯ ಸುದ್ದಿಗಳಿಗೆ ಮಹತ್ವ ಕೊಡುವದು ತರವಲ್ಲ. ನನ್ನ ಪತ್ರಿಕೆ ಹೀಗೆ ಮಹತ್ವ ಕೊಡುವದಿಲ್ಲ" ಎಂದು ಆ ಗೆಳೆಯರು ಹೇಳಿದ್ದರು. ನೀವು ನಿಷ್ಪಕ್ಷಪಾತದಿಂದ ಸತ್ಯ ಸಂಗತಿಗಳನ್ನು ಮರೆಮಾಜದೆ ಪ್ರಸಿದ್ಧಿಸುವದರಿಂದ ಭಾರತಕ್ಕೆ ನಿಜವಾದ ಸೇವೆ ಸಲ್ಲಿಸಿದಂತಾಗುವದು ಎಂದು ಮಹಾತ್ಮರು ಅವರಿಗೆ ಹೇಳಿದರು. "ನ್ಯಾಯವಾದ ಉದ್ದೇಶಕ್ಕೆ ಸತ್ಯದಿಂದ ಯಾವ ಹಾನಿಯೂ ಇಲ್ಲ" ವೆಂದರು ಗಾಂಧೀಜಿ.

ಈ ದಂಗೆ ಇನ್ನೂ ಕೆಲಕಾಲ ನಡೆಯುವದು ಎಂದು ಮಹಾತ್ಮರು 'ದಂಗೆ ನಿಲ್ಲುವದೆಂದು?' ಎಂದು ಕೇಳಿದ ಪ್ರಶ್ನೆಗೆ ಉತ್ತರಿಸಿದರು. "ದಂಗೆಗೆ ಉತ್ತೇಜನ ಕೊಡುವ ಬಣಗಳೂ ಇವೆ"

"ಬ್ರಿಟಿಶ ಸೈನಿಕರು ಇಲ್ಲಿರುವ ವರೆಗೆ ಹಿಂದುಗಳೂ ಮುಸ್ಲಿಂರೂ ಅವರಸಹಾಯ ಪಡೆಯಲು ಪ್ರಯತ್ನಿಸುವರು. ಮತ್ತು ದಂಗೆ ಹಾಗೇ ಸಾಗುವದು. ಸ್ವಾತಂತ್ರ್ಯಕ್ಕಾಗಿ ಹೆಣಗುವವರಿಗೆ ಇದಕ್ಕಿಂತ ಹೆಚ್ಚಿನ ದುರ್ಘಟನೆ ಸಂಭವಿಸಲಾರದು ಎಂದು ನಾನು ಈಗ ಹೇಳಿದರೆ ಅರಣ್ಯರೋದನವಾಗಬಹುದು" ಎಂದು ಮಹಾತ್ಮರೆಂದರು.

### ಬ್ರಿಟಿಶ ದಳಗಳ ಆತಂಕ

ಇದನ್ನು ಕೇಳಿ ಆಂಗ್ಲ ನಿರ್ದೇಶಕರಿಗೆ ಆಘಾತವಾದಂತಾಯಿತು "ತಮ್ಮ ಸೇನೆ ಇಲ್ಲಿಂದ ಬೇಗನೆ ಹೊರಟು ಹೋಗಬೇಕೆಂದು ಬ್ರಿಟಿಷನು ಅಪೇಕ್ಷಿಸುತ್ತಾನೆ. ಯಾರಿಂದ ತಡೆ ಇದೆ?" ಎಂದು ಕೇಳಿದರು.

"ಬ್ರಿಟಿಶರಲ್ಲದೆ ಮತ್ತಿನ್ನಾರು? ಇಲ್ಲವಾದರೆ ಬ್ರಿಟಿಶ ಸೈನ್ಯವನ್ನು ಇಲ್ಲಿಂದ ಸಾಗಿಸದಿರುವದಕ್ಕೆ ಕಾರಣ ತೋರಿಸಿ ಕೊಡಬೇಕು."

ಆ ಗೆಳೆಯರು ಕೆಲಹೊತ್ತು ವಾದಿಸಿದ ನಂತರ ಬ್ರಿಟಿಶರ ವ್ಯಾಪಾರಿ ಮತ್ತು ಇತರ ಹಿತ ಸಂಬಂಧಗಳೂ ಅವರ ಹಸ್ತಕರೂ ಬ್ರಿಟಿಶ ಸೈನ್ಯದ ನಿರ್ಗಮನ ಮಾರ್ಗದಲ್ಲಿಯ ಆತಂಕವಾಗಿದ್ದಾರೆ ಎಂಬುದನ್ನು ಒಪ್ಪಿಕೊಂಡರು. ಶಾಂತಿ ಸುವ್ಯವಸ್ಥೆಯ ಕಾರ್ಯದಲ್ಲಿ ಬ್ರಿಟಿಶ ಸೈನ್ಯದ ಭಾಗವೇನು ಎಂಬ ಬಗ್ಗೆ ಅವರಿಗಿನ್ನೂ ಸಂದೇಹವಿತ್ತು. "ಅವರಿಲ್ಲಿರುವ ವರೆಗೆ ಶಾಂತಿ ಸಾಧ್ಯವಿಲ್ಲೆಂದು ನೀವು ಹೇಳುತ್ತೀರಿ. ಆದರೆ ಶಾಂತಿ ರಕ್ಷಣೆಗಾಗಿ ದಿನಾಲೂ ಅವರನ್ನು ಆಮಂತ್ರಿಸಲಾಗುತ್ತಿದೆ. ಅವರನ್ನು ಸಾಕಷ್ಟು ಉಪಯೋಗಿಸುವದಿಲ್ಲೆಂಬ ದೂರು ಕೇಳಿ ಬರುತ್ತಿದೆ"

"ಅಂತೇ ಅವರನ್ನು ಇಲ್ಲಿಂದ ಹಿಂತೆಗೆದುಕೊಳ್ಳಬೇಕು. ಅವರ ಅಸ್ತಿತ್ವವು ದಂಗೆಗೆ ಪ್ರತಿಬಂಧವನ್ನೊಡ್ಡದೆ ದಂಡನಾತ್ಮಕವಾಗಿರುತ್ತದೆ. ದಂಗೆ ಸಂಭವಿಸಿದ ನಂತರ ಶಾಂತತೆಯ ರಕ್ಷಣೆಗಾಗಿ ಅವರನ್ನು ನಿಯೋಜಿಸಲಾಗುತ್ತಿದೆ. ಭಾವೀ ಇತಿಹಾಸಕಾರರೂ ಇದನ್ನು ಸಮರ್ಥಿಸುವರು. ಪೂರ್ವ ಬಂಗಾಲದಲ್ಲಿಯೂ ಶಾಂತತೆ ಸ್ಥಾಪಿತವಾಗುವದು. ಆದರೆ ಎಷ್ಟೊಂದು ಕೊಲೆ—ಸುಲಿಗೆ ನಡೆದ ಮೇಲೆ?"

"ಭಾರತವನ್ನು ರಕ್ಷಿಸುವದಕ್ಕಾಗಿ ಬ್ರಿಟಿಶ ದಳಗಳು ಇಲ್ಲಿಲ್ಲ" ಎಂದು ಮಹಾತ್ಮರು ಮುಂದರಿದರು. "ಒತ್ತಾಯದಿಂದ ಭಾರತದ ಮೇಲೆ ಹೊರಿಸಲಾದ. ಈಗ ಬ್ರಿಟಿಶ ಸರಕಾರಕ್ಕೂ ನಾಶ ಮಾಡಲಸಾಧ್ಯವಾದ ಬ್ರಿಟಿಶರ ಹಿತಸಂಬಂಧಗಳ ರಕ್ಷಣೆಗಾಗಿ ಬ್ರಿಟಿಶ ಸೈನ್ಯವಿಲ್ಲಿದೆ. ಬ್ರಿಟಿಶರಲ್ಲಿಗೆ ಲೋಕೋಪಕಾರ ಬುದ್ಧಿಯಿಂದ ಬರಲಿಲ್ಲ. ಅವರೆಷ್ಟೆ ಹೇಳಿಕೊಂಡರೂ ಅವರ ಹಾಗೂ ಅವರ ಸೈನ್ಯದ ವಾಸ್ತವ್ಯವು ಪರಹಿತನಿಷ್ಠೆಗಾಗಿ ಇದೆ ಎಂಬುದರಲ್ಲಿ ಸತ್ಯಾಂಶವಿಲ್ಲ.

### ಯುದ್ಧಮುಕ್ತಾಯಕ್ಕೆ

ನಂತರ ಮಾತುಕತೆ ಯುದ್ಧದ ಕಡೆಗೆ ಹೊರಳಿತು. "ನೀವೀಗ ಕಂಡಂತೆ ಪದೇ ಪದೇ ಸಂಭವಿಸುತ್ತಿರುವ ಯುದ್ಧಗಳನ್ನೆಂತು ನಿಲ್ಲಿಸಬಹುದು?"

"ದೊಡ್ಡ ರಾಷ್ಟ್ರಗಳು ಸುಲಿಗೆಯ ಆಶೆ ತೊರೆದು ಯುದ್ಧಕಾರಣವಾದ ಹಿಂಸಾವೃತ್ತಿಯನ್ನು ಬಿಟ್ಟುಕೊಟ್ಟು ಅಟಂ ಬಾಂಬನ್ನು ತ್ಯಜಿಸಿದ ಹೊರತು ಜಗತ್ತಿನಲ್ಲಿ ಶಾಂತಿಗೆ ಎಡೆಯಿಲ್ಲೆಂದು ನನಗೆ ಖಂಡಿತವಾಗಿದೆ. ಯುದ್ಧಕಾಲದಲ್ಲಿ ನಾನಿದನ್ನು ಅಡಿ ತೋರಿಸಲಿಚ್ಛಿಸಿದೆ. ಬ್ರಿಟಿಶರಿಗೂ ಹಿಟ್ಲರನಿಗೂ ಜಪಾನರಿಗೂ ಬಹಿರಂಗ ಪತ್ರಗಳನ್ನು ಬರೆದೆ. ಆದರೆ ನನ್ನನ್ನು ಪಂಚಮದಳದವನೆಂದು ಹಿಡಿದಿಡಲಾಯಿತು."

"ಅಹಿಂಸೆಯು ಪರಿಣಾಮಕಾರಿಯಾಗಲು ಬಹಳ ಸಮಯ ಹಿಡಿಯಬಹುದು. ದ್ವಿತೀಯ ರಂಗ ಪ್ರಾರಂಭಿಸದಿದ್ದರೆ ರಶಿಯಾ ಉಳಿಯುತ್ತಿರಲಿಲ್ಲ"ವೆಂದು ಆ ಗೆಳೆಯರು ವಾದಿಸಿದರು.

"ಇವೆಲ್ಲ ತಾರ್ಕಿಕ ವಾದ"ವೆಂದು ಮಹಾತ್ಮರು ನುಡಿದರು. "ಈ ರೀತಿ ವಿಚಾರ ಮಾಡಲು ನನಗೆ ಸಾಧ್ಯವಿಲ್ಲ. ಇಲ್ಲದಿದ್ದರೆ ಇಂಥ ವಿಷಮ ಪರಿಸ್ಥಿತಿಯಲ್ಲಿಯೂ ಅತ್ಯುಜ್ವಲವಾಗಿ ಬೆಳಗುತ್ತಿರುವ ವಿಶ್ವಾಸವನ್ನೇ ನಾನು ನೆಚ್ಚದಂತಾದೀತು. ನಿಮಿಷಾರ್ಧದಲ್ಲಿ ಇಡೀ ಸಮಾಜವನ್ನೇ ಮತಾಂತರಿಸಿದ ಆಶ್ಚರ್ಯಕರ ಉದಾಹರಣೆಗಳನ್ನು ಇತಿಹಾಸವು ಹೇಳುತ್ತಿದೆ. ಬೋಅರ ಯುದ್ಧವನ್ನೇ ತೆಗೆದುಕೊಳ್ಳಿರಿ. ಅದು ಬ್ರಿಟಿಶರಿಗೆ 'ಮಫಕಿಂಗ' ಎಂಬ ಹೊಸ ಶಬ್ದ ಕೊಟ್ಟಿದೆ. ಮೆಫಕಿಂಗ ದಿನದ ನಂತರ ಜನರು ಹುಚ್ಚರಂತಾದರು. ಎರಡು ವರ್ಷಗಳೊಳಗಾಗಿ ಇಡೀ ಬ್ರಿಟಿಶ ರಾಷ್ಟ್ರವು ಬದಲಾವಣೆ ಹೊಂದಿತು. ಹೆನ್ರಿಕ್ಯಾಂಬೆಲ್ಲ ಬ್ಯಾನರಮನನು ಮುಖ್ಯ ಮಂತ್ರಿಯಾದ. ಯುದ್ಧದ ಲಾಭಗಳನ್ನೆಲ್ಲ ಬಿಟ್ಟುಕೊಡಲಾಯಿತು." ಇತ್ತೀಚಿಗೆ ಚುನಾವಣೆಯಲ್ಲಿ ಕೂಲಿಕಾರರಿಗೆ ದೊರೆತ ವಿಜಯವೂ ಇನ್ನೊಂದು ಇಂಥ ಸಂಗತಿಯಾಗಿದೆ.

"ನಿನ್ನಿನ ವರೆಗೆ ಬ್ರಿಟಿಶ ಜನತೆಯನ್ನು ನಡುಗಿಸಿಬಿಟ್ಟಿದ್ದ ಪ್ರಸಿದ್ಧ ವಾಗ್ಮಿ ಚರ್ಚಿಲ್ಲರು ಇಂದು ಅವರ ಮುಖಂಡರಾಗಬಾರದೆಂಬುದೊಂದು ವಿಚಿತ್ರವೇ ಸರಿ. ಇತರ ಎಲ್ಲ ಶಕ್ತಿಗಳು ಅಳಿದ ನಂತರ ಉಳಿಯುವದು ಒಂದೇ. ಬೇಕಾದರೆ ಅದಕ್ಕೆ ದೇವರೆನ್ನಿರಿ, ಪ್ರಕೃತಿಯೆನ್ನಿರಿ. ಇಲ್ಲವೆ ಬೇಕಾದ ಹೆಸರಿನಿಂದ ಕರೆಯಿರಿ. ಈ ಶಕ್ತಿಯಲ್ಲಿಟ್ಟ ವಿಶ್ವಾಸವನ್ನು ಹೆಚ್ಚಿಸಲು ಈ ಎಲ್ಲ ಸಂಗತಿಗಳು ಕಾರಣವಾಗುವವು." ಕ್ರಿಸ್ತನು ಪುನಃ ಬರುವನೆಂದು ನಂಬಿರುವವರ ವಿಶ್ವಾಸಕ್ಕೆ ಸರಿಯಾಗಿದೆ. ಮಹಾತ್ಮರಲ್ಲಿ ಅಹಿಂಸೆಯ ಬಗ್ಗೆ ಇದ್ದ ವಿಶ್ವಾಸ. ಎರಡು ಸಾವಿರ ವರ್ಷಗಳ ಹಿಂದೆ ಅದು ಸಂಭವಿಸಿದ್ದರೂ ಅದನ್ನು ನಂಬಿದವನ ಜೀವಾವಧಿಯಲ್ಲಿಯೆ ಅದು ನಡೆಯಬೇಕು. ಅದಿನ್ನೂ ಕನಸಾಗಿಯೆ ಉಳಿದಿದೆ. ವಿಶ್ವಾಸಕ್ಕೆ ಬೇರೆ ರೀತಿಯ ವಿಚಾರ ಹೊಳೆಯಲಿಕ್ಕಿಲ್ಲ.

ಸೋದೇಪುರ
೩೦—೧೦—೪೬

ಪ್ಯಾರೇಲಾಲ

# ವಿಶ್ವಸ್ತರು ಎಂಥವರಿರಬೇಕು?

ಅಖಿಲಭಾರತ ಚರಕಸಂಘ ಕೈಕೊಂಡ ಕಾರ್ಯ ಬಹಳ ವ್ಯಾಪಕ ಮತ್ತು ಪ್ರಚಂಡವಾಗಿದೆ. ಆದುದರಿಂದ ಆ ಸಂಘದ ವಿಶ್ವಸ್ತನ ಯೋಗ್ಯತೆಯನ್ನು ನಿರ್ಣಯಿಸಲು ಬಹಳ ದಕ್ಷತೆಯಿಂದ ವಿಚಾರ ಮಾಡಬೇಕಾಗುವದು. ನನ್ನ ಅಭಿಪ್ರಾಯದ ಮೇರೆಗೆ ಇಂಥವರು ವಿಶ್ವಸ್ತರಾಗಬಲ್ಲರು.

೧) ಹೆಸರಿಗಾಗಿ ಯಾರೂ ವಿಶ್ವಸ್ತರಾಗಬಾರದು. ವರ್ಷದಲ್ಲಿ ೪—೬ ತಿಂಗಳು ಕೋಟ್ಯವಧಿ ಜನರು ನಿರುದ್ಯೋಗಿಗಳಾಗಿ ಉಳಿಯುವ ಹಿಂದುಸ್ಥಾನದಂಥ ದೇಶದಲ್ಲಿ, ಪ್ರತಿಯೊಬ್ಬ ಸಶಕ್ತ ಮನುಷ್ಯ ದಿನಾಲು ಒಂದು ಗಂ[illegible] ಯಾದರೂ ನೂಲು ತೆಗೆದರೆ ಇಲ್ಲಿನ ಜನರಿಗೆ ಕೈನೂಲಿನ ಬಟ್ಟೆಯನ್ನೇ ಪೂರಯಿಸುವುದು ಶಕ್ಯವಿದೆ. ಅವರು ಬೇರೆ ಯಾವ ಬಟ್ಟೆಗಳನ್ನು ಮುಟ್ಟಬೇಕಾಗಿಲ್ಲ ಎಂಬದರಲ್ಲಿ ವಿಶ್ವಸ್ತ ನಿಷ್ಠನಾಗಿರತಕ್ಕದ್ದು.

೨) ಈ ರೀತಿ ನಿಶ್ಚಲ ವಿಶ್ವಾಸವಿದ್ದ ಪ್ರತಿಯೊಬ್ಬ ವಿಶ್ವಸ್ತನು ಎರಡನೆಯವರಿಗೆ ಪಾಠ ಹಾಕಿ ಕೊಡುವದಕ್ಕಾಗಿ ನಿಯಮಿತವಾಗಿ ಸ್ವತಃ ನೂಲು ತೆಗೆಯಬೇಕು— ದೇಶಕ್ಕೆ ತಮ್ಮ ಸೇವೆಯನ್ನು ಸಲ್ಲಿಸುವ ಸಮಾಧಾನಕ್ಕಾಗಿಯೂ ಅವರು ನಿಯಮಿತವಾಗಿ ನೂಲು ತೆಗೆಯಬೇಕು.

೩) ವಿಶ್ವಸ್ತರು ಹಿಂದುಸ್ಥಾನದ ಹಳ್ಳಿಗಳ ಜೀವನದೊಂದಿಗೆ ಸಮರಸರಾಗಿರಲು ಶಕ್ಯವಿದ್ದ ಬಗೆಯಲ್ಲಿ ಪ್ರಯತ್ನಿಸತಕ್ಕದ್ದು.

೪) ಹಿಂದುಸ್ಥಾನ ಹಳ್ಳಿಗಳ ನಾಡು. ಆದರೆ ನಮ್ಮ ಸುಶಿಕ್ಷಿತ ಜನರು ಹಳ್ಳಿಗಳನ್ನು ಅನಾದರಿಸಿದ್ದಾರೆ. ನಮ್ಮ ಹಳ್ಳಿಗರ ಉನ್ನತ ಜೀವನಕ್ಕೆ ಇರುವ ಕೊರತೆಗಳನ್ನೆಲ್ಲ ಪೂರ್ತಿ ಮಾಡಲು ವಿಶ್ವಸ್ತರು ಪ್ರಯತ್ನಿಸಬೇಕು. ಹೀಗೆ ಮಾಡುವಾಗ ಅವರು ಹಳ್ಳಿಯ ಜೀವನವು ನಗರ ಜೀವನದ ಪಡಿನೆಳಲಾಗಬಾರದೆಂಬದನ್ನು ನೆನಪಿನಲ್ಲಿಡತಕ್ಕದ್ದು. ನಗರಗಳೇ ಹಳ್ಳಿಜೀವನದ ಮಾದರಿಯನ್ನು ಸ್ವೀಕರಿಸಿ ಹಳ್ಳಿಗಳಿಗಾಗಿಯೆ ಬಾಳಬೇಕು.

೫) ಯಾವಳೊಬ್ಬ ವಿಶ್ವಸ್ತಳ ಗಂಡ ಗಿರಣಿಯ ಉದ್ಯೋಗದಲ್ಲಿ ತೊಡಗಿದ್ದರೆ ಆ ವಿಶ್ವಾಸ್ತಳು ತನ್ನ ಸ್ವಂತ ಹಣದಿಂದ ಒಬ್ಬ ನೇಕಾರನನ್ನು ಕೂಲಿ ಎಂದಿಟ್ಟುಕೊಂಡು ತಾನು ತನ್ನಗೆಳೆಯನು ಇಲ್ಲವೆ ಆಪ್ತರು ನೂತ ನೂಲಿನಿಂದ ಅರಿವೆಗಳನ್ನು ನೇಯಿಸಿಕೊಂಡು ಧರಿಸಬೇಕು.

೬) ಕೈನೂಲು ಮತ್ತು ಕೈಮಗ್ಗಗಳ ಸಂಬಂಧದ ಸಾಹಿತ್ಯವನ್ನೆಲ್ಲ ಓದಿಕೊಂಡು ಈ ಕೈಗಾರಿಕೆಗಳ ಆರ್ಥಿಕ ಮತ್ತು ನೈತಿಕ ಮಹತ್ವವನ್ನು ಅರಗಿಸಕೊಳ್ಳಬೇಕು. ಇವುಗಳ ಪ್ರಚಾರ ಸಾರ್ವತ್ರಿಕವಾಗಿ ಎಂತು ಆಗಬಲ್ಲದೆಂಬದನ್ನು ಅವರು ಅರಿತುಕೊಂಡು ಎರಡನೆಯವರಿಗೆ ಅದನ್ನು ವಿವರಿಸಬೇಕು.

೭) ಪ್ರಾರಂಭದಿಂದ ಇಂದಿನ ವರೆಗಿನ ಅಖಿಲ ಭಾರತ ಚರಕ ಸಂಘದ ಇತಿಹಾಸವನ್ನೆಲ್ಲ ವಿಶ್ವಸ್ತರು ಅಭ್ಯಸಿಸಬೇಕು. ಮತ್ತು ತಿಳಿದುಕೊಳ್ಳಬೇಕು. ಬಟ್ಟೆ ಕೈಗಾರಿಕೆಯಲ್ಲಿ ಅದು ಮಾಡಿದ ಬೇರೆ ಬೇರೆ ಕ್ರಾಂತಿಕಾರಕ ಸುಧಾರಣೆಗಳನ್ನು ತಿಳಿದುಕೊಳ್ಳಬೇಕು.

ಇವು ನನ್ನ ವಿಚಾರಗಳು. ಸಂಘವು ಒಪ್ಪುವವರೆಗೆ ಇವುಗಳನ್ನು ಪಾಲಿಸಲೇಬೇಕೆಂಬ ಒತ್ತಾಯವಿಲ್ಲ. ಇವುಗಳ ಬಗ್ಗೆ ಸಹಾಯಕ ತಿದ್ದುಪಡಿಗಳನ್ನು ಇಲ್ಲವೆ ಹೆಚ್ಚಿನ ಸೂಚನೆಗಳನ್ನು ಮಾಡಬಹುದು.

ಹೊಸದಿಲ್ಲಿ
೨೭—೧೦—೪೬

ಮೋ. ಕ. ಗಾಂಧಿ
(ಗುಜರಾತಿಯಿಂದ)



# ವಾರದ ಪತ್ರ

### ಆ ಕರೆ

ಮಹಾತ್ಮರು ಸಾಕಷ್ಟು ವಾದವಿವಾದ, ದೀರ್ಘ ವಿಚಾರದ ನಂತರ ತಮ್ಮ ಬಂಗಾಲ ಪ್ರಯಾಣದ ದಿನವನ್ನು ಅಕ್ಟೋಬರ ೨೮ ನೇ ತಾರೀಕಿಗೆ ನಿರ್ಧರಿಸಿದರು. ಅವರ ಪರಮಾಪ್ತಸ್ನೇಹಿತರೊಬ್ಬರು ಕೊನೆಯ ಗಳಿಗೆಯಲ್ಲಿ ಅವರನ್ನು ಬಂಗಾಲದ ದೀರ್ಘ ಪ್ರವಾಸದಿಂದ ಪರಾವೃತ್ತಗೊಳಿಸಬೇಕೆಂದು ಪ್ರಯತ್ನಿಸುತ್ತಿದ್ದರು. ಮಹಾತ್ಮರು "ನಾನು ಅಲ್ಲಿ ಹೋಗಿ ಏನು ಮಾಡಬಲ್ಲೆನೆಂಬುದು ನನಗೇ ತಿಳಿದಿಲ್ಲ" ವೆಂದರು. "ಸ್ಥಾನಲ್ಲಿಗೆ ಹೋಗದಿದ್ದರೆ ನನ್ನ ಮನಸ್ಸು ಸಮಾಧಾನವಾಗಲಾರದು ಎಂದಿಷ್ಟೇ ನನಗೆ ಗೊತ್ತಿದೆ" ನಂತರ ಅವರು 'ವಿಚಾರಶಕ್ತಿ' ಯನ್ನು ಬಣ್ಣಿಸಲು ಪ್ರಾರಂಭಿಸಿದರು. "ವಿಚಾರಗಳಲ್ಲಿ ಸಜೀವ ನಿರ್ಜೀವವೆಂಬೆರಡು ಭೇದಗಳಿವೆ. ಒಬ್ಬನ ತಲೆಯಲ್ಲಿ ನಿರ್ಜೀವ ವಿಚಾರಗಳು ಗುಡ್ಡದಷ್ಟು ಸುಳಿಯುತ್ತಿದ್ದರೂ ನಿರುಪಯುಕ್ತ" ಅವು ಫಲಿಸದ ಬೀಜದಂತಿವೆಂದರು. ಗಾಂಧೀಜಿ. "ಆದರೆ ಒಬ್ಬನ ವ್ಯಕ್ತಿತ್ವದ ಅತ್ಯಂತಿಕ ಕಳಕಳಿಯ ಮೂಲಕವಾಗಿ ಅವನ ಹೃದಯಾಂತರಾಳದಿಂದ ಹೊರಡುವ ಒಂದೇ ಒಂದು ಪವಿತ್ರವಾದ ಸಜೀವ ವಿಚಾರವು ಫಲಿತ ಬೀಜದಂತೆ ಅದ್ಭುತ ಕಾರ್ಯ ಸಾಧಿಸುವದು" ನೌಖಾಲಿಯ ಜನರನ್ನು ಕಾಣಬೇಕೆಂದು ತಮ್ಮ ಮನಸಿನಲ್ಲಿ ತಂತಾನೆ ಹುಟ್ಟಿದ ಈ ಸೆಳೆತವನ್ನು ಹತ್ತಿಕ್ಕಲು ಅವರು ಒಪ್ಪದಾಗಿದ್ದರು. ಕಳೆದ ರವಿವಾರ ದಿಲ್ಲಿಯಲ್ಲಿ ಸಾಯಂಪ್ರಾರ್ಥನೆಯ ಸಭೆಯಲ್ಲಿ ಮಹಾತ್ಮರು ತಾವು ಮರುದಿನ ಮುಂಜಾನೆ ಕಲಕತ್ತೆಗೆ ತೆರಳುವದಾಗಿ ಹೇಳಿದರು. ದೇವರು ತಮ್ಮನ್ನು ತಿರುಗಿ ದಿಲ್ಲಿಗೆ ಎಂದು ಕರೆತರುವನೊ ಎಂಬದು ತಮಗೇ ಗೊತ್ತಿಲ್ಲವೆಂದರು. ಕಲಕತ್ತೆಯಿಂದ ಮುಂದೆ ಅವರಿಗೆ ನೌಖಾಲಿಗೆ ಹೋಗಬೇಕಾಗಿತ್ತು. ಪ್ರವಾಸ ಕಷ್ಟಕರವಾಗಿದ್ದು ಅವರ ಆರೋಗ್ಯ ಕೆಟ್ಟಿತ್ತು. ಆದರೆ ಪ್ರತಿಯೊಬ್ಬನೂ ತನ್ನ ಕರ್ತವ್ಯವನ್ನು ಮಾಡಬೇಕು; ತನ್ನ ದಾರಿಯನ್ನು ಸುಗಮಗೊಳಿಸಲು ದೇವರಲ್ಲಿ ವಿಶ್ವಾಸವಿಡಬೇಕು. ದೇವರು ಮಾರ್ಗದಲ್ಲಿಯ ತೊಂದರೆಗಳನ್ನು ಸದಾ ನಿವಾರಿಸುತ್ತಾನೆಂದಲ್ಲ; ಆದರೆ ಅವನ್ನು ಸಹಿಸುವ ಶಕ್ತಿಯನ್ನು ಮಾತ್ರ ಕೊಡುತ್ತಾನೆ.

ನಿಲ್ದಾಣಕ್ಕೆ ಯಾರೂ ಬರುವ ಕಾರಣವಿಲ್ಲ. ಎಂದು ಮುಂದರಿಸಿದರು ಗಾಂಧೀಜಿ. ಭಾರತವು ತಮಗೆ ಸಾಕಷ್ಟು ಪ್ರೀತಿಯನ್ನು ತೋರಿಸಿದೆ. ಇನ್ನು ಹೆಚ್ಚಿನ ಪ್ರದರ್ಶನ ಬೇಕಿಲ್ಲ.

ಯಾರ ಬಗ್ಗೆ ಕೂಡ ನಿರ್ಣಯ ಕೊಡಲು ಅವರು ಬಂಗಾಲಕ್ಕೆ ಹೋಗುತ್ತಿರುವದಿಲ್ಲ. ಜನತೆಯ ಸೇವಕನೆಂದು ಅವರು ಅಲ್ಲಿಗೆ ಹೋಗುತ್ತಿದ್ದಾರೆ. ಅಲ್ಲಿ ಅವರು ಹಿಂದುಗಳನ್ನೂ ಮುಸ್ಲಿಂರನ್ನೂ ಕೂಡಿಯೆ ಭೆಟ್ಟಿಯಾಗುವರು. ಇಂದು ಕೆಲವು ಮುಸ್ಲಿಂರು ಅವರನ್ನು ವೈರಿಯೆಂದು ಭಾವಿಸಿದ್ದಾರೆ. ಸದಾಕಾಲ ಅವರು ಹಾಗೆ ಭಾವಿಸಿಲ್ಲ. ಆದರೆ ಮಹಾತ್ಮರಿಗೆ ಅವರ ಸಿಟ್ಟಿನ ಗಣನೆ ಇಲ್ಲ. ಮಹಾತ್ಮರ ಸಹಧರ್ಮಿಗಳೆ ಅನೇಕ ಸಲ ಅವರ ಮೇಲೆ ಸಿಟ್ಟಿಗೆದ್ದಿಲ್ಲವೆ? ಯಾವ ಜಾತಿ ಜನಾಂಗದವರೇ ಇರಲಿ, ಯಾವ ದೇಶಕೋಶದವರೆ ಇರಲಿ ಇಡೀ ಮಾನವ ಜನಾಂಗವೇ ತಮ್ಮ ಆಪ್ತವರ್ಗದ್ದು ಎಂಬ ಪಾಠವನ್ನು ಮಹಾತ್ಮರು ತಮ್ಮ ವಯಸ್ಸಿನ ೧೭ನೇ ವರ್ಷದಲ್ಲಿಯೇ ಕಲಿತಿದ್ದಾರೆ. 'ನಾವು ದೇವರ ಸೇವಕರಾಗಿದ್ದರೆ ಅವನಿಂದ ಸೃಷ್ಟ ವಸ್ತುಗಳ ಸೇವಕರೂ ಆಗಬೇಕು.

ಈ ದೃಷ್ಟಿಯಿಂದಲೆ ಅವರು ಬಂಗಾಲಕ್ಕೆ ಹೋಗುತ್ತಿದ್ದಾರೆ. ಹಿಂದು—ಮುಸ್ಲಿಂರು ಎಂದಿಗೂ ಪರಸ್ಪರ ವೈರಿಗಳಾಗಲಾರರು ಎಂದು ಮಹಾತ್ಮರು ಅವರಿಗೆ ಹೇಳುವರು. ಅವರೆಲ್ಲ ಭಾರತದಲ್ಲಿಯೆ ಹುಟ್ಟಿ ಬೆಳೆದಿದ್ದಾರೆ: ಇಲ್ಲಿಯೆ ಬಾಳಿ ಅಳಿಯಬೇಕಾಗಿದೆ. ಧರ್ಮಾಂತರ ಹೊಂದಿದ ಮಾತ್ರಕ್ಕೆ ಈ ಮೂಲಭೂತ ಸಂಗತಿಯೇನೂ ಬದಲಿಸಲಾರದು. ಧರ್ಮಾಂತರದಿಂದ ಜನರ ಜನಾಂಗವೇ ಬದಲಾಗಿ ಹೋಗುತ್ತದೆಂದು ಕೆಲವರು ಭಾವಿಸುತ್ತಿದ್ದರೆ ಅವರು ಕೂಡ ವೈರಿಗಳಾಗಲು ಯಾವ ಕಾರಣವೂ ಇಲ್ಲ.

ಸ್ತ್ರೀಯರ ಸಂಕಟಗಳನ್ನು ಕೇಳಿ ಯಾವಾಗಲೂ ಅವರ ಎದೆ ಕರಗುತ್ತದೆ. ಬಂಗಾಲಕ್ಕೆ ಹೋಗಿ ಆ ಮಹಿಳೆಯರ ದುಃಖಾಶ್ರುಗಳನ್ನು ಒರೆಸಿ ಸಾಧ್ಯವಿದ್ದರೆ ಅವರಲ್ಲಿ ಧೈರ್ಯ ತುಂಬಬೇಕೆಂದು ಮಹಾತ್ಮರ ಇಚ್ಛೆಯಾಗಿದೆ. ಕಲಕತ್ತೆಯಲ್ಲಿ ಅವರು ಗವರ್ನರರನ್ನೂ ಮುಖ್ಯ ಮಂತ್ರಿ ಶ್ರೀ ಸುಹ್ರವರ್ದಿಯವರನ್ನೂ ಭೆಟ್ಟಿಯಾಗಲು ಪ್ರಯತ್ನಿಸಿ ನಂತರ ನೌಖಾಲಿಗೆ ತೆರಳುವರು.

ಯಾವ ಶುಭಶಕುನಗಳಿಲ್ಲದ ಕಾಲಕ್ಕೆ ಅವರು ಸಂಚಾರಕ್ಕೆ ಹೊರಟಿದ್ದಾರೆ. ನಡುಗಾಲ ಸರಕಾರದ ಮಂತ್ರಿಗಳಾದ ಪಂ. ಜವಾಹರಲಾಲ ಮತ್ತಿತರ ಮಂತ್ರಿಗಳನ್ನು ಮೊನ್ನಿನ ದಿನ ವೈಸರಾಯರ ಭುವನದೆದುರು ನಿಂದಿಸಿ ಅವಮಾನಿಸಿದ ಉದಾಹರಣೆಯನ್ನು ಅವರು ಹೇಳಿದರು. ಇದು ಕೆಟ್ಟದ್ದು. ಮುಸ್ಲಿಂ ಲೀಗ ಮತ್ತು ಕಾಂಗ್ರೆಸು ಸೇರಿ ಕೇಂದ್ರದಲ್ಲಿ ಸಮ್ಮಿಶ್ರ ಸರಕಾರ ಸ್ಥಾಪಿಸಿರುವಾಗ ಇಂಥ ಘಟನೆಗಳೇಕೆ ಸಂಭವಿಸಬೇಕು? ತಮ್ಮ ಯೋಗ್ಯತೆ ಮೀರಿ ಜನತೆಯ ಸೇವೆ ಮಾಡಲಿಚ್ಛಿಸುವ ಮುಖಂಡರಿಗೆ ಸ್ತುತಿನಿಂದೆಗಳೆರಡೂ ಅಷ್ಟೆ. ಆದರೆ ಜನರೆ ಚನ್ನಾಗಿ ವರ್ತಿಸಬೇಕು.

"ಎಲ್ಲ ಮಂತ್ರಿಗಳೂ ಒಕ್ಕಟ್ಟಿನಿಂದ ಕೆಲಸ ಮಾಡಲು ಸಮರ್ಥರಾಗಲಿ ಎಂದು ನಾವು ಇನ್ನೂ ಪ್ರಾರ್ಥಿಸೋಣ. ಭಾರತವು ಒಕ್ಕೊರಲಿನಿಂದ ನುಡಿಯಬಲ್ಲದಾದರೆ ಜಗತ್ತಿನಲ್ಲಿಯೇ ದೊಡ್ಡದಾದ ರಾಷ್ಟ್ರವಾಗುವದು. ಭಾರತಕ್ಕೆ ಆ ಸ್ಥಾನ ದೊರೆಯಲೆಂದು ಪ್ರತಿ ಭಾರತೀಯನೂ ಹಾರೈಸಬೇಕು"

### ಪ್ರವಾಸ

ನಮ್ಮಲ್ಲಿ ಕೆಲವರು ಎಣಿಸಿದಂತೆ ಈ ಪ್ರವಾಸವು ಆಯಾಸಕರವಾಗಿ ಪರಿಣಮಿಸಿತು. ಅಲಿಗಡ, ತುಂಡಲಾ, ಕಾನಪುರ ಮತ್ತು ಅಸಾನಸೋಲ ನಿಲ್ದಾಣಗಳೆಲ್ಲ ಜನರಿಂದ ಕಿಕ್ಕಿರಿದು ತುಂಬಿದ್ದವಲ್ಲದೆ ಮಾರ್ಗದಲ್ಲಿಯ ದೊಡ್ಡ ನಿಲ್ದಾಣಗಳಲ್ಲೆಲ್ಲ ಜನಸಾಗರವೇ ಕಾಣುತ್ತಿತ್ತು. ಆ ಜನರು ಗಾಡಿಯ ಚಪ್ಪರದ ಮೇಲೇರಿದರು, ಒಳಗಿನವರ ಉಸಿರುಕಟ್ಟುವಂತೆ ಕಿಟಕಿಗಳಿಗೆ ಮುಕುರಿದರು, ಕಿಟಕಿಗಳ ಕಾಜುಗಳನ್ನು ಒಡೆದರು, ಕಿವಿಯ ಕಿವುಡಾಗುವಂತೆ ಕಿರಚಿದರು. ಮಹಾತ್ಮರ ದರ್ಶನ ಪಡೆಯುವುದಕ್ಕಾಗಿ ಅನೇಕ ಸಲ ಗಾಡಿಯಲ್ಲಿಯ ಸರಪಣಿಯನ್ನು ಹಿಡಿದು ಜಗ್ಗಿದ್ದರಿಂದ 'ವ್ಯಾಕುಂಬ್ರೇಕ'ಗಳ ಸಂಬಂಧ ತಪ್ಪಿಸಬೇಕಾಯಿತು. ನಿಲ್ದಾಣದ ಅಧಿಕಾರಿಗಳು ಇವರ ಮೇಲೆ ಪಂಪಿನಿಂದ ನೀರನ್ನುಗ್ಗಿ ಇವರನ್ನು ಚದುರಿಸಲು ಪ್ರಯತ್ನಿಸಿದರು. ಆದರೆ ಅದರ ಪರಿಣಾಮ ಅವರ ಮೇಲೆ ಏನೂ ಆಗದೆ ಡಬ್ಬಿಗಳಲ್ಲಿ ನೀರು ತುಂಬಿತಷ್ಟೆ. ಅಲೀಗಡದಲ್ಲಿ ಡಬ್ಬಿಯ ಬ್ರೆಕುಗಳ ಗ್ರೀಜಪೆಟ್ಟಿಗೆಯಲ್ಲಿಯ ಚಿಂದಿಗಳಿಗೆ ಕಿಡಿತಾಕಿ ಸುಡಹತ್ತಿದ ವಾಸನೆ ಬಂದರೂ ಆ ಸಂಗತಿಯನ್ನು ನಿಲ್ದಾಣದ ಅಧಿಕಾರಿಗಳಿಗೆ ತಿಳಿಸಲು ಜನ ಸಾಗರದಲ್ಲಿಂದ ಈಸಿ ಹೋಗಬೇಕಾದರೆ ಪರಮ ಪ್ರಯಾಸವಾಯಿತು. ಬೆಂಕಿಯೆ ಹತ್ತಿದ್ದರೆ ಆ ಡಬ್ಬಿಯಲ್ಲಿದ್ದವರೆಲ್ಲರೂ ತಮ್ಮ ಸಾಮಾನುಗಳ ಸಹಿತವಾಗಿ ಹೇಗೆ ಪಾರಾಗುತ್ತಿದ್ದರೊ ಎಂದು ಆಶ್ಚರ್ಯವಾಗದಿರದು.

ನಂತರ ಸಂಜೆಗೆ ಜನರ ಕೂಗಾಟ ಚೀರಾಟ ಹೆಚ್ಚಾದಂತೆಲ್ಲ ಮಹಾತ್ಮರು ಅದನ್ನು ತಾಳಲಾರದೆ ಕಿವಿ ಮುಚ್ಚಿಕೊಂಡು ಕುಳಿತರು. ಆದರೂ ಡಬ್ಬಿಯಲ್ಲಿಯ ದೀಪಗಳನ್ನೆಲ್ಲ ನಂದಿಸಿ ಬಿಟ್ಟಿಗೆಂದು ಬಂದವರ ನಿರಾಶೆ ಮಾಡಬಹುದೆಂದು ಸೂಚಿಸಿದರೆ ಮಹಾತ್ಮರು ಒಪ್ಪಲಿಲ್ಲ. ಕರ್ತವ್ಯಕ್ಕಿಂತ ತಮ್ಮ ಸುಖವನ್ನೆ ಹೆಚ್ಚೆಂದು ಬಗೆಯದೆ ಕೊನೆಯ ರಕ್ತಕಣವಿರುವವರೆಗೂ ಜನರ ಸೇವೆಗೈಯ್ಯುವದೇ ಅವರ ಸರಳ ವಿಶ್ವಾಸವನ್ನು ಸಮಾಧಾನ ಪಡಿಸುವದೇ ಏಕಮೇವ ಮಾರ್ಗವೆಂದರು ಗಾಂಧೀಜಿ.

### ಸೋದೇಪುರದಲ್ಲಿ

ಮಹಾತ್ಮರ ವಿಶೇಷ ಗಾಡಿಯು ಲಿಲೂಹಾಕ್ಕೆ ಐದು ಗಂಟೆ ತಡಮಾಡಿ ತಲುಪಿತು. ಅಲ್ಲಿಂದ ಅವರನ್ನು ನೇರವಾಗಿ ಶ್ರೀ ಸತೀಶಚಂದ್ರದಾಸಗುಪ್ತರ ಖಾದಿ ಪ್ರತಿಷ್ಠಾನ ಆಶ್ರಮಕ್ಕೆ ಕರೆದೊಯ್ಯಲಾಯಿತು. ಅವರು ಅಲ್ಲಿಗೆ ೫-೩೦ ಕ್ಕೆ ಮುಟ್ಟಿದರು. ಸೋದೆಪುರದ ಸುತ್ತುಮುತ್ತಲಿನ ಸಾವಿರಾರು ಜನರು ಸಾಯಂಪ್ರಾರ್ಥನೆಗೆಂದು ನೆರೆದಿದ್ದರು. ಸಂಜೆ ೫-೩೦ ಗಂಟೆಗೆ ಪ್ರಾರ್ಥನೆ ನಡೆಯಬೇಕೆಂದು ಗೊತ್ತಾಗಿತ್ತು. ಆದರೆ ಮಹಾತ್ಮರಿಗೆ ಆ ಸಭೆಗೆ ಬರಲು ೭ ಗಂಟೆಗೆ ಅವಕಾಶವಾಯಿತು. ಇಷ್ಟು ಬೇಗನೆ ತಾವು ಸೋದೇಪುರಕ್ಕೆ ಹಿಂದಿರುಗುವದಾಗಿ ಎಣಿಸಿರಲಿಲ್ಲೆಂದು ಮಹಾತ್ಮರು ಆ ಸಭೆಯಲ್ಲಿ ಹೇಳಿದರು. ಆದರೆ ದೇವರು ಪುನಃ ನನ್ನನ್ನು ನಿಮ್ಮ ಕಡೆಗೆ ಕಳಿಸಿದ್ದಾನೆ. ಗಾಡಿಯು ಐದು ತಾಸು ತಡಮಾಡಿ ಬಂದಿತು. ಅದು ಕೂಡ ದೇವರ ಇಚ್ಛೆಯೆ ಎಂದರು ಅವರು. ಅಲಿಗಡ, ಖುರ್ಜಾರೋಡ ಕಾನಪೂರ ಮುಂತಾದ ದೊಡ್ಡ ನಿಲ್ದಾಣಗಳಲ್ಲಿ ಜನರು ನೆರೆದದ್ದರಿಂದ ಗಾಡಿಯು ತಡವಾಯಿತು ನಿಜ. ಆದರೆ 'ಅವನ' ಇಚ್ಛೆಯಿಲ್ಲದೆ ಹುಲ್ಲುಕಡ್ಡಿಯೂ ಅಲುಗಾಡುವದಿಲ್ಲೆಂಬ ಹಳೆಯ ನಾಣ್ಣುಡಿಯಲ್ಲಿ ಅವರು ಶಬ್ದಶಃ ವಿಶ್ವಾಸವಿಟ್ಟಿದ್ದಾರೆ. ತಮ್ಮ ವಂಚನೆಯನ್ನು ಅಡಗಿಸುವದಕ್ಕಾಗಿ ಯೋಜಿಸಿದ ಉಪಾಯವೆ ಅವರ ದೇವರ ವಿಷಯದ ಈ ಮಾತುಕತೆ ಎಂದು ಕೆಲವರು ಹೇಳಬಹುದು. ತಮ್ಮಲ್ಲಿ ಯಾವ ವಂಚನೆ ಇದ್ದ ಬಗ್ಗೆ ತಮಗೆ ಅರಿವಿಲ್ಲೆಂದು ಮಹಾತ್ಮರು ಹೇಳಬಲ್ಲರು. ದೇವರು ಸತ್ಯವೆಂದು ನಂಬಿದ್ದನ್ನು ಅವರು ಆಡುತ್ತಾರೆ. ತಾವು ಕಲಕತ್ತೆಗೆ ಬರಿ ಮನಸ್ಸಿನಿಂದ ಬಂದಿರುವದಾಗಿ ಮಹಾತ್ಮರು ತಮ್ಮ ಮುಂದಿನ ಕಾರ್ಯಕ್ರಮದ ಬಗ್ಗೆ ಹೇಳಿದರು. ಇಲ್ಲಿ ತಾವು ಏನು ಮಾಡಬಹುದು, ಎಷ್ಟು ದಿನ ಇರಬಹುದು ಎಂಬುದು ಅವರಿಗೇ ಗೊತ್ತಿಲ್ಲ. ನೌಖಾಲಿಗೆ ಮುಟ್ಟಿದ ನಂತರ ದೇವರು ಮುಂದಿನ ದಾರಿ ತೋರುವನು.

ಮರುದಿನ ಅವರು ಕಲಕತ್ತೆಯಲ್ಲಿ ಗವರ್ನರರನ್ನೂ ಮುಖ್ಯ ಮಂತ್ರಿಗಳನ್ನೂ ಭೆಟ್ಟಿಯಾಗಬೇಕಾಗಿದ್ದುದರಿಂದ ಅಂದು ಅವರು ಪ್ರಾರ್ಥನಾ ಸಭೆಗೆ ತಡಮಾಡಿ ಬಂದದ್ದಕ್ಕಾಗಿ ಕ್ಷಮೆ ಕೋರಿದರು. ಜನತೆಯ ಸೇವೆಗಾಗಿ ತನ್ನ ಜೀವನವನ್ನೇ ಮೀಸಲಾಗಿಟ್ಟವನ ಆಯುಷ್ಯವೇ ಪ್ರಾರ್ಥನಾಮಯವಾಗಿರುತ್ತದೆಂದರು ಗಾಂಧೀಜಿ. ಇದರಿಂದ ಈಗ ಪ್ರಾರ್ಥನೆಗಾಗಿ ಗೊತ್ತುಪಡಿಸಿದ ವೇಳೆಯ ಮಹತ್ವವನ್ನು ಕಡಿಮೆಯಾಗಿಸುವೆನೆಂದಲ್ಲ. ಸಾಮೂಹಿಕ ಪ್ರಾರ್ಥನೆ ಮತ್ತು ವೈಯಕ್ತಿಕ ಪ್ರಾರ್ಥನೆಯಲ್ಲಿ ಭೇದವಿದೆ. ಸಾಮೂಹಿಕ ಪ್ರಾರ್ಥನೆಗೆ ನಾನು ಸಾಕಷ್ಟು ನ್ಯಾಯವೆಸಗಿಲ್ಲವೆಂದು ಖೇದವಾಗಿದೆಂದರು. ಇಂಥ ಅಪೂರ್ವ ಸಹಿಷ್ಣುತೆಯಿಂದ ನೀವು ದಾರಿಕಾಯ್ದದ್ದು ನಿಮ್ಮ ಔದಾರ್ಯ. ಇದನ್ನು ಕಂಡು ನಾನು ಕೈಕೊಂಡ ಕೆಲಸದಲ್ಲಿ ನನಗೆ ಹೆಚ್ಚು ವಿಶ್ವಾಸ ಆನಂದ ಉಂಟಾಗಿದೆ. ಆದರೂ ಪ್ರಾರ್ಥನಾ ಸಮಯಕ್ಕೆ ಸರಿಯಾಗಿ ಬರದಿದ್ದಕ್ಕಾಗಿ ತಮ್ಮನ್ನು ಎಂದಿಗೂ ಸುಲಭವಾಗಿ ಕ್ಷಮಿಸಲಾರೆವೆಂದರು.

ಮಂತ್ರಿಮಂಡಳದ ಅಧ್ಯಕ್ಷರಾದ ವೈಸರಾಯರು ಪಂ. ಜವಾಹರಲಾಲ ನೆಹರೂರು ಉಪಾಧ್ಯಕ್ಷರಾಗಿದ್ದ ಮತ್ತು ಕಾಂಗ್ರೆಸ ಲೀಗ ಪ್ರತಿನಿಧಿಗಳಿಂದ ರಚಿತವಾದ ಮಂತ್ರಿಮಂಡಳದ ಪರವಾಗಿ ಹೊರಡಿಸಿದ ಪ್ರಕಟನೆಯತ್ತ ಜನರ ಗಮನವನ್ನು ಸೆಳೆದರು. ಭಾರತದ ಉಭಯ ಪಕ್ಷಗಳು ತಮ್ಮ ದ್ವೇಷವನ್ನು ಮರೆತು ಒಂದು ಮನಸ್ಸಿನವರಾಗಬೇಕೆಂದು ವೈಸರಾಯರು ತಮ್ಮ ಹಾಗೂ ತಮ್ಮ ಮಂತ್ರಿಗಳ ಪರವಾಗಿ ಹೊರಡಿಸಿರುವ ಆ ಪ್ರಕಟನೆಯಲ್ಲಿ ಹೇಳಿದ್ದಾರೆ. ಐಕ್ಯವು ಸ್ವಾಭಾವಿಕವಾಗಿರಬೇಕು, ಪೋಲೀಸ ಇಲ್ಲವೆ ಸೈನಿಕರ ಒತ್ತಾಯದಿಂದ ಸಾಧಿಸಿದ್ದಾಗಿರಬಾರದು. ಈ ಉದ್ದೇಶದಿಂದಲೆ ಗಾಂಧೀಜಿಯವರು ಬಂಗಾಲಕ್ಕೆ ಬಂದುದು. ಅವರು ಯಾವ ಪಕ್ಷವನ್ನೂ ವಹಿಸಿಲ್ಲ. ಅವರು ಸತ್ಯ ನ್ಯಾಯಗಳ ಬೆನ್ನು ಮಾತ್ರ ಕಟ್ಟಬಲ್ಲರು. ಹಿಂದು-ಮುಸ್ಲಿಂರ ಹೃದಯಗಳು ಒಂದಾಗಬೇಕೆಂದು ಎಲ್ಲರೂ ತಮ್ಮೊಡನೆ ಪ್ರಾರ್ಥಿಸಬೇಕೆಂಬುದೇ ಅವರ ಅಪೇಕ್ಷೆ. ಹಿಂಸ್ರಪಶುಗಳಂತೆ ತಂತಮ್ಮಲ್ಲಿ ಜಗಳಾಡಿ ತಮ್ಮ ಗೌರವವನ್ನು ಕಳೆದುಕೊಂಡರೆ ಇಡೀ ಜಗತ್ತಿನಲ್ಲಿ ಅವರ ಹೆಸರು ಕಲಂಕಿತವಾಗುವದು.

### ಆಶಾಕಿರಣ

ಉಭಯ ಪಕ್ಷಗಳಲ್ಲಿ ಶಾಂತಿ ಸ್ಥಾಪಿಸಲ್ಪಡುವ ಸೂಕ್ಷ್ಮ ಆಶಾಕಿರಣವಿದೆಂದು ಮಹಾತ್ಮರು ಇಲ್ಲಿಗೆ ಬಂದ ಮೂರನೆಯ ದಿನ ಪ್ರಾರ್ಥನಾ ಸಭೆಯಲ್ಲಿ ಹೇಳಿದರು. ಅವರು ಗವರ್ನರರನ್ನೂ ಮುಖ್ಯ ಮಂತ್ರಿಗಳನ್ನೂ ಎರಡು ಸಲ ಕಂಡಿದ್ದರು. ಗವರ್ನರರನ್ನು ಕಂಡದ್ದು ಕೇವಲ ಶಿಷ್ಟಾಚಾರದ ಮೂಲಕ ಎಂದೆನ್ನಬಹುದು. ಅವರ ಕೆಲಸವಿದ್ದದ್ದು ಮಂತ್ರಿಗಳೊಡನೆಯೆ. ಅಗ್ನಿಗಾಹುತಿಯಾದ ಅಂಗಡಿ ಮನೆಗಳಲ್ಲಿಯ ಅವಶೇಷಗಳು ನಿರ್ಜನ ಬೀದಿಗಳಲ್ಲಿ ಎರಡು ಅಡಿಯೆತ್ತರ ಬಿದ್ದಿರುವಾಗ ಮುಖ್ಯ ಬೀದಿಗೆ ಸೇರುವ ಸಂದಿಗೊಂದಿಗಳಲ್ಲಿ ದೃಷ್ಟಿ ಹರಿಯುವವರೆಗೆ ಉಧ್ವಸ್ತ ನೋಟವೇ ಕಾಣುತ್ತಿರುವಾಗ ಮಾನವನನ್ನು ಪಶುವನ್ನಾಗಿಸುವ ಸಾಮೂಹಿಕ ಹುಚ್ಚನ್ನು ಕಂಡು ಇದನ್ನೆಲ್ಲ ನೋಡುತ್ತಿರುವವನ ಮನಸಿನಲ್ಲಿ ನಿರಾಶಾಭಾವವು ಹುಟ್ಟದಿರದು. ಸಹಜವಾಗಿ ಈ ಪರಿಸ್ಥಿತಿ ಉಳಿಯಲಾರದು. ಮಾನವ ಸ್ವಭಾವಕ್ಕೆ ಇದು ಸಹನವಾಗಲಾರದು. "ಎಲ್ಲರನ್ನೂ ನೀವು ಕೊನೆಯವರೆಗೆ ಮೂರ್ಖರನ್ನಾಗಿಸಲಾರಿರಿ." ಎಂದು ಅಬ್ರಹಾಮ ಲಿಂಕನರು ಹೇಳಿದ್ದಾರೆ. ಜನರು ತಂತಮ್ಮಲ್ಲಿ ಹಿಂಸ್ರ ಪಶುಗಳಂತೆ ಕಾದುತ್ತಿದ್ದಾರೆಂಬ ಚಿಹ್ನಗಳು ಕಂಡು ಬರುತ್ತಿವೆ. ಈ ಕಾದಾಟದಿಂದ ಕಲಕತ್ತಾ, ಬಂಗಾಲ, ಭಾರತ ಅಲ್ಲವೆ ಜಗತ್ತಿಗೆ ಕಲ್ಯಾಣವಾಗಲಾರದು.

ಹೋರಾಡುವ ಬಣಗಳಲ್ಲಿ ಶಾಂತಿಯನ್ನು ಸ್ಥಾಪಿಸುವದೆ ಎಳೆತನದಿಂದಲೂ ಅವರ ಉದ್ಯೋಗವಾಗಿದೆ. ಅವರು ವಕೀಲಿ ವೃತ್ತಿಯಲ್ಲಿದ್ದಾಗಲೂ ಬಡಿದಾಡುವ ಬಣಗಳಲ್ಲಿ ಒಡಂಬಡಿಕೆ ಮಾಡಲು ಪ್ರಯತ್ನಿಸುತ್ತಿದ್ದರು. ಉಭಯ ಪಕ್ಷಗಳನ್ನು ಒಂದುಗೂಡಿಸಲಿಕ್ಕೆ ಆಗದೇಕೆ? ತಾವು ಆಶಾವಾದಿಗಳಿರುವದಾಗಿ ಅವರು ಹೇಳಿದರು.

ಈ ಕಗ್ಗೊಲೆ ನಿಂತು ಉಭಯ ಪಕ್ಷಗಳ ಹೃದಯ ಬೆರೆತು ಒಂದಾಗಲಿ ಎಂದು ಜನರೆಲ್ಲ ಸೇರಿ ತಮ್ಮೊಡನೆ ಪ್ರಾರ್ಥಿಸಬೇಕು. ಜನರಿಂದ ಅವರಿಗೆ ಬೇಕಾಗಿರುವ ಸಹಾಯವಿಷ್ಟೆ. ಭಾರತವು ವಿಭಕ್ತವಾಗಬೇಕೇ ಅವಿಭಕ್ತವಾಗಿರಬೇಕೆ ಎಂಬುದನ್ನು ಬಲಪ್ರಯೋಗದಿಂದ ನಿರ್ಧರಿಸಲಾಗದು. ಪರಸ್ಪರ ತಿಳಿವಳಿಕೆಯಿಂದ ಅದು ಸಾಧ್ಯ. ತಾವು ಒಂದಾಗಿರಬೇಕೊ ಬೇರೆಯಾಗಬೇಕೊ ಎಂಬುದನ್ನು ಸದಿಚ್ಛೆಯಿಂದ ಗೊತ್ತುಪಡಿಸಬೇಕು.

ಯಾರದೆ ಗೌರವ ಹಾನಿ, ಅಪಮಾನಕ್ಕೆ ಕಾರಣವಾಗುವ ಕೃತ್ಯದಲ್ಲಿ ತಾವು ಪಾಲುಗಾರರಾಗಲಾರರು. ಅದ್ದರಿಂದ ಶಾಶ್ವತ ಶಾಂತಿ ಬೇಕಾಗಿದ್ದರೆ ಅದು ಗೌರವಯುತವಾಗಿರಬೇಕು. ಅದನ್ನು ಬಲಿಕೊಟ್ಟರೆ ಸಾಧ್ಯವಿಲ್ಲ.

ಮುಸ್ಲಿಂ ಪ್ರಮುಖನೊಬ್ಬನು ಅವರನ್ನು ಕಂಡು ಆಡಿದ ಮಾತನ್ನೆ ಅವರು ಇಲ್ಲಿ ಹೇಳಿದ್ದಾರೆ. ಆ ಮುಸ್ಲಿಂ ಸ್ನೇಹಿತನಿಂತು ನುಡಿದಿದ್ದನು. "ಪಾಕಿಸ್ತಾನವಾಗಲಿ ಅಖಂಡ ಭಾರತವೇ ಆಗಲಿ ನಾವು ನಮ್ಮ ಗುರಿಯನ್ನು ರಕ್ತಪಾತವಿಲ್ಲದೆ ಮುಟ್ಟತಕ್ಕದ್ದು. ಹೋರಾಟ, ರಕ್ತಪಾತವಿಲ್ಲದೆ ಅದು ಸಾಧ್ಯವಾಗುವಂತಿರದಿದ್ದರೆ ನಮಗದು ಬೇಡ ಎಂದೂ ನಾನು ಹೇಳುವಷ್ಟು ಮುಂದೆ ಹೋಗಬಲ್ಲೆ."

### ಉಗ್ರ ನಿರ್ಧಾರ

"ನೀವು ನೌಖಾಲಿಗೆ ಹೋಗುವದೇಕೆ? ನೌಖಾಲಿಯಲ್ಲಿ ಸಂಭವಿಸಿದ ಘಟನೆಗಳಿಗಿಂತ ದಾರುಣವಾದ ಘಟನೆಗಳು ಸಂಭವಿಸಿದ ಮುಂಬಯಿ, ಅಹಮದಾಬಾದ, ಛಪ್ರಾಗಳಿಗೆ ನೀವು ಹೋಗಲಿಲ್ಲ. ನೀವು ನೌಖಾಲಿಗೆ ಹೋಗುವದರಿಂದ ಅಲ್ಲಿಯ ಈಗಿನ ದ್ವೇಷವು ಇನ್ನೂ ಹೆಚ್ಚದಿರಲಾರದೆ? ಮೇಲೆ ಹೇಳಿದ ನಗರಗಳಲ್ಲಿ ಮುಸ್ಲಿಂರಿಗೆ ಹಾನಿಯಾಯಿತೆಂದು ನೀವು ಅಲ್ಲಿಗೆ ಹೋಗದೆ ನೌಖಾಲಿಯಲ್ಲಿ ಹಿಂದುಗಳಿಗೆ ವಿನಾಶ ಬಂದೊದಗಿತೆಂದು ಹೋಗುತ್ತಿರುವಿರಾ?" ಎಂದು ಒಬ್ಬ ಮುಸ್ಲಿಂ ಸ್ನೇಹಿತನು ಅವರನ್ನು

—೧೧ನೇ ಪುಟಕ್ಕೆ

# ಮಧ್ಯಪ್ರಾಂತದಲ್ಲಿ ಮದ್ಯಪಾನ ಪ್ರತಿಬಂಧ

೧೯೩೭ ನೆಯ ಇಸ್ವಿಯ ಉತ್ತರಾರ್ಧದಲ್ಲಿ ಮಧ್ಯಪ್ರಾಂತದ ಕಾಂಗ್ರೆಸ ಸರಕಾರದವರು ಶಿಂದಿಯನ್ನೊಳಗೊಂಡು ಎಲ್ಲ ಮದ್ಯಗಳ ಪ್ರತಿಬಂಧ ಧೋರಣವನ್ನು ಸ್ವೀಕರಿಸಬೇಕೆಂದು ನಿರ್ಧರಿಸಿದರೆಂದು ಆ ಪ್ರಾಂತದ ಅಬಕಾರಿ ಕಮೀಶನರರ ವರದಿಯಿಂದ ಗೊತ್ತಾಗುತ್ತದೆ. ಇದನ್ನು ಕಾರ್ಯರೂಪದಲ್ಲಿ ತರಲು ಮಧ್ಯಪ್ರಾಂತ ವರ್‍ಹಾಡ ಮದ್ಯಪ್ರತಿಬಂಧ ಕಾಯದೆ ಸ್ವೀಕೃತವಾಗಿ ೧೯೩೮ ನೇ ಎಪ್ರಿಲದಿಂದ ಜಾರಿಯಲ್ಲಿ ಬಂದಿತು. ೧೯೪೦ ರಲ್ಲಿ ಮದ್ಯಪಾನ ಪ್ರತಿಬಂಧ ಪ್ರದೇಶ ೨೨೨೪೫ ಚದರು ಮೈಲು ಇದ್ದಿತು. ಅಂದರೆ ಇಡೀ ಪ್ರಾಂತದ ಸುಮಾರು ಕಾಲು ಭಾಗ ಪ್ರದೇಶದಲ್ಲಿ ಮದ್ಯಪಾನ ಪ್ರತಿಬಂಧಿಸಲಾಗಿತ್ತು. ೧೯೪೫ ರ ಜಾನೇವಾರಿ ೧ ಕ್ಕೆ ಕಾಟ್ನಿ ಮುರುವಾರಾ ನಗರಗಳಲ್ಲಿ ಮದ್ಯಪಾನ ಪ್ರತಿಬಂಧವನ್ನು ಹಿಂತೆಗೆದುಕೊಳ್ಳಲಾಯಿತು. ಆದರೆ ೧೯೪೬ ನೇ ಅಕ್ಟೋಬರ ೧ ರಿಂದ ಅದನ್ನು ಪುನಃ ಜಾರಿಯಲ್ಲಿ ತರಬೇಕೆಂದು ಸದ್ಯದ ಸರಕಾರ ನಿರ್ಧರಿಸಿದೆ. ಅಲ್ಲದೆ ೧೭೩೬೦ ಚದರುಮೈಲು ಪ್ರದೇಶದಲ್ಲಿ ಇದನ್ನು ಅನ್ವಯಿಸಬೇಕೆಂದು ನಿರ್ಧರಿಸಲಾಗಿದೆ.

ಈ ರೀತಿ ಮದ್ಯಪ್ರತಿಬಂಧ ಪ್ರದೇಶ ಒಟ್ಟು ೩೯೬೪೩ ಚದರು ಮೈಲು ಆಗುವದು. ಅಂದರೆ ಇಡೀ ಪ್ರಾಂತದ ಅರ್ಧದಷ್ಟು ಭಾಗದಲ್ಲಿ ಇದು ಜಾರಿಯಲ್ಲಿ ಬಂದಂತಾಗುವದು. ಪ್ರಾಂತದ ಇಡೀ ಕ್ಷೇತ್ರ ೯೮೩೯೯ ಚದರು ಮೈಲು ಇದೆ.

ಈ ರೀತಿ ಮದ್ಯಪಾನ ಪ್ರತಿಬಂಧ ಪ್ರದೇಶವನ್ನು ಹೆಚ್ಚಿಸಿದ್ದರಿಂದ ಸರಕಾರಕ್ಕೆ ಈ ವರ್ಷ ಸುಮಾರು ೪೫-೫೦ ಲಕ್ಷ ರೂಪಾಯಿ ಹಾನಿಯಾಗುವದು. ಇನ್ನು ಅಲ್ಪಾವಧಿಯಲ್ಲಿಯೆ ಇಡೀ ಪ್ರಾಂತವನ್ನು ನಿರ್ಮಾದಕ ಕ್ಷೇತ್ರವನ್ನಾಗಿ ಮಾಡಬೇಕೆಂದು ಸರಕಾರ ಯೋಜಿಸಿದೆ. ಈ ಯೋಜನೆಯನ್ನು ಜಾರಿಯಲ್ಲಿ ತರುವದರಿಂದ ಸರಕಾರ ೧॥ ಕೋಟಿ ರೂಪಾಯಿಗಳನ್ನು ಕಳೆದುಕೊಳ್ಳಬೇಕಾಗುವದು.

ಅವಶ್ಯವೆನಿಸಿದರೆ ಸ್ಥಳಿಕ ಶಾಸನ ಸಭಾಸದಸ್ಯರ ಮತ್ತು ಕಾಂಗ್ರೆಸ ಸಮಿತಿಗಳ ಸಹಾಯವನ್ನು ಮದ್ಯಪಾನ ಪ್ರತಿಬಂಧ ಕಾಯದೆಯ ಕಕ್ಷೆಯಲ್ಲಿ ಬರುವ ಅಪರಾಧಿಗಳನ್ನು ಹುಡುಕುವಲ್ಲಿ ಮತ್ತು ಆ ಅಪರಾಧವಾಗದಂತೆ ನೋಡಿಕೊಳ್ಳುವಲ್ಲಿ ಅಬಕಾರಿಖಾತೆಯವರು ತೆಗೆದುಕೊಳ್ಳಬೇಕೆಂದು ಸೂಚಿಸಲಾಗಿದೆ. ಸೆರೆಯನ್ನು ಮಾಡುವದಕ್ಕೆ ಮುಖ್ಯವಾಗಿ ಬೇಕಾಗುವ ಮಾಹುವಾ ೫ ಸೇರಿಗಿಂತ ಹೆಚ್ಚು ಯಾರೂ ಇಟ್ಟುಕೊಳ್ಳಬಾರದೆಂದು ಭಟ್ಟಿಸೆರೆ ಪ್ರತಿಬಂಧಕ ನಿಯಮಗಳನ್ನು ಮಾಡಲಾಗಿದೆ. ಹೆಚ್ಚು ಪ್ರಮಾಣದಲ್ಲಿ ಅದನ್ನು ಇಟ್ಟುಕೊಳ್ಳಬಯಸುವವರು ಮತ್ತು ಮಾರಾಟ ಮಾಡಬಯಸುವವರು ಲಾಯಸೆನ್ಸ ಪಡೆಯಬೇಕೆಂದೂ ವಿಧಿಸಲಾಗಿದೆ. ವರ್ಧಾ ಮತ್ತು ಅಕೋಲಾ ಜಿಲ್ಹೆಗಳಲ್ಲಿ ೧೫-೮-೧೯೪೬ ನೇ ಇಸ್ವಿಯಿಂದಲೆ ಈ ನಿಯಮಗಳು ಜಾರಿಯಲ್ಲಿ ಬಂದಿವೆ. ಈ ಜಿಲ್ಹೆಗಳಲ್ಲಿಯ ಅನುಭವದಿಂದ ನಿರ್ಮಾದಕವಾಗದೆ ಉಳಿದ ಜಿಲ್ಹೆಗಳಲ್ಲಿಯೂ ಇದನ್ನು ಜಾರಿಯಲ್ಲಿ ತರಲಾಗುವದು.

ಮದ್ಯಪಾನ ಪ್ರತಿಬಂಧವನ್ನು ಪರಿಣಾಮಕಾರಿ ಮಾಡಲಿಕ್ಕೆ ಕೈಕೊಂಡ ಉಳಿದ ಉಪಾಯಗಳು-

೧) ನಿರ್ಮಾದಕ ಕ್ಷೇತ್ರಗಳಲ್ಲಿ ಮದ್ಯನಿರೋಧಕ ಸಮಿತಿಗಳನ್ನು ಸ್ಥಾಪಿಸಲಾಗುವದು. ಹಳೆಯವನ್ನು ಪುನರುಜ್ಜೀವಿಸಲಾಗುವದು. ಮಾದಕ ಕ್ಷೇತ್ರಗಳನ್ನು ನಿರ್ಮಾದಕ ಕ್ಷೇತ್ರಗಳನ್ನಾಗಿ ಪರಿವರ್ತಿಸಲು ಅವಶ್ಯಕ ಸಿದ್ಧತೆ ಮಾಡಲು ಮದ್ಯಪಾನ ನಿಷೇಧಕ ಸಮಿತಿಗಳನ್ನು ಸ್ಥಾಪಿಸಲಾಗುವದು. ಧಾರ್ಮಿಕ ಪಂಚಾಯತಿಗಳನ್ನು ಮತ್ತು ಮನರಂಜನೆಯ ಕೇಂದ್ರಗಳನ್ನು ಸಂಸ್ಥಾಪಿಸುವ ಯೋಜನೆಯೂ ಇದೆ.

೨) ಮಾಯಾ ದೀಪಗಳು, ಸ್ಲಾಯಿಡು, ಮದ್ಯಪಾನ ನಿಷೇಧಕ ಭಿತ್ತಿ ಪತ್ರಗಳು ಮೊದಲಾದವುಗಳ ಮುಖಾಂತರ ಹಾಗು ಮದ್ಯಪಾನ ನಿಷೇಧಕ ಸಾಹಿತ್ಯದ ಸಹಾಯದಿಂದ ಪ್ರಚಾರ ಕಾರ್ಯ ನಡೆಸುವದು.

೩) ೧೯೩೮ ನೆ ಇಸ್ವಿಯ ಮದ್ಯಪಾನ ಪ್ರತಿಬಂಧಕ ಕಾಯಿದೆಯ ಕಲಮುಗಳನ್ನು ವಿವರಿಸುವ ೬೫ ಸಾವಿರ ಹಸ್ತಪತ್ರಿಕೆಗಳನ್ನು ಮತ್ತು ಯಾವ ಯಾವ ಕ್ಷೇತ್ರಗಳಲ್ಲಿ ಮದ್ಯಪಾನವನ್ನು ಪ್ರತಿಬಂಧಿಸಲಾಗಿದೆ ಎಂಬುದನ್ನು ನಿರ್ದಿಷ್ಟಪಡಿಸುವ ದೊಡ್ಡ ಆಕಾರದ ೧೫ ಸಾವಿರ ಪತ್ರಿಕೆಗಳನ್ನು ಬೇರೆ ಬೇರೆ ಭಾಷೆಗಳಲ್ಲಿ ಮುದ್ರಿಸಿ ಅವುಗಳನ್ನು ಪ್ರಚಾರಪಡಿಸುವದಕ್ಕಾಗಿ ಡೆಪ್ಯುಟಿ ಕಮಿಶನರರ ಮತ್ತು ರೇಲ್ವೆ ಅಧಿಕಾರಿಗಳ ಕಡೆಗೆ ಕಳಿಸಲಾಗಿದೆ.

೪) ಮದ್ಯಪಾನ ಪ್ರತಿಬಂಧವು ಪರಿಣಾಮಕಾರಿಯಾಗುವಂತೆ ಜಾರಿಯಲ್ಲಿ ಬರಬೇಕೆಂದು ಕುಡಿಯುವ ಚಟವಿದ್ದ ಸರಕಾರಿ ಅಧಿಕಾರಿಗಳನ್ನೆಲ್ಲ ನಿರ್ಮಾದಕ ಕ್ಷೇತ್ರದಿಂದ ಮಾದಕ ಕ್ಷೇತ್ರಗಳಿಗೆ ವರ್ಗಾಯಿಸಲಾಗಿದೆ. ಯುದ್ಧಪೂರ್ವಕಾಲೀನ ಮದ್ಯಪಾನಪ್ರತಿಬಂಧದ ಪರಿಣಾಮಗಳ ವರದಿ ಇಂತಿದೆ.

ಮೊದಲು ಕುಡಿಯುವ ಚಟವಿದ್ದ ಜನರ ನೈತಿಕ ಶಾರೀರಿಕ, ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಮದ್ಯಪಾನ ಪ್ರತಿಬಂಧದಿಂದ ನಿಃಸಂದೇಹವಾಗಿ ಸುಧಾರಿಸಿದೆಂದು ವರದಿಗಳಿಂದ ಗೊತ್ತಾಗುವದು. ಮದ್ಯಪಾನ ಪ್ರತಿಬಂಧದಿಂದ ಆದ ಹಣದ ಉಳಿತಾಯ ಜೀವನ ವೆಚ್ಚ ಹೆಚ್ಚಿದ್ದರಿಂದ ಬಾಯಿಗೂಡುತ್ತದೆ. ಅವರೀಗ ಹೆಚ್ಚು ನಿರೋಗಿಗಳು, ಸುಖಿಗಳು ಕಾಣುವರು. ಅವರ ಮಕ್ಕಳು ಒಳ್ಳೆ ಉಡುಪುಗಳನ್ನು ಧರಿಸುತಿದ್ದು ಮೊದಲಿಗಿಂತ ಹೆಚ್ಚು ಆಹಾರ ಅವರಿಗೆ ಸಿಕ್ಕಹತ್ತಿದೆ. ಮದ್ಯಪಾನ ಪ್ರತಿಬಂಧದಿಂದ ಮನೆಗಳಲ್ಲಿ ಶಾಂತಿ ಮತ್ತು ಸುಖ ಸಿಕ್ಕಹತ್ತಿದ್ದರಿಂದ ಹೆಣ್ಣುಮಕ್ಕಳು ಇದರಿಂದಾದ ಲಾಭವನ್ನು ಹೆಚ್ಚಾಗಿ ಬಣ್ಣಿಸಹತ್ತಿರುವರು. ತಮ್ಮ ಪತಿರಾಜ, ಮೊದಲಿಗಿಂತ ಹೆಚ್ಚು ವಿಶ್ವಾಸಿಕ ಮತ್ತು ತನ್ನ ಕೆಲಸದಲ್ಲಿ ಹೆಚ್ಚು ನಿಶ್ಚಲನಾಗಿದ್ದುದು ಅವರಿಗೆ ಕಂಡು ಬರುತ್ತಿದೆ. ಉಳಿದ ಯಾವ ಚಟಗಳಿಗೂ ಬಲಿಬೀಳದಂತೆ ಆ ಹೆಣ್ಣುಮಕ್ಕಳೀಗ ನಿಶೆಯಲ್ಲಿಲ್ಲದ ತಮ್ಮ ಪತಿರಾಜನ ಮೇಲೆ ವರ್ಚಸ್ಸನ್ನುಪಯೋಗಿಸಬಹುದಾಗಿದೆ"

ಹಿಂದಿನ ಪ್ರಗತಿಯು ಸುಂದರ ಚಿತ್ರ ಮತ್ತೂ ಸುಂದರವಾಗಿ ಪರಿಣಮಿಸಲೆಂದು ಆಸಿಸುವಾ.

ಹೊಸದಿಲ್ಲಿ ಪ್ಯಾರೇಲಾಲ

೧೪-೧೦-೧೯೪೬

## ನಾರದ ಪತ್ರ

(೯ನೇ ಪುಟದಿಂದ)

ಕೇಳಿದನು. ನೌಖಾಲಿಯಲ್ಲಿ ಸಂಭವಿಸಿದಂಥ ದುರ್ಘಟನೆ ಈ ಗೆಳೆಯನು ಹೇಳಿದ ನಗರಗಳಲ್ಲಿ ಸಂಭವಿಸಿದ್ದರೆ 'ಮತ್ತು ತಾವಲ್ಲಿಗೆ ಹೋಗಲೆಬೇಕೆಂದು ಅವರಿಗೆನಿಸಿದ್ದರೆ ಮಹಾತ್ಮರು ನೇರವಾಗಿ ಅಲ್ಲಿಗೆ ಹೋಗಿಬಿಡುತ್ತಿದ್ದರು. ಅವರ ಅಹಿಂಸೆಯು ತತ್ವವೀಗ ದಿವ್ಯಕ್ಕೊಳಗಾಗಿದೆ. ಈ ಗಂಭೀರ ಪರಿಸ್ಥಿತಿಯಲ್ಲಿ ಅದರ ಗತಿಯೇನಾಗುವದೊ ನೋಡಬೇಕು. ಅಹಿಂಸೆಗೆ ಬೆಲೆಯಿಲ್ಲದಿದ್ದರೆ ಮಹಾತ್ಮರು ತಾವು ದಿವಾಳಿಖೋರರೆಂದು ಸಾರಿಬಿಡುವದು ಉತ್ತಮ. ದಂಗೆಯು ಸಂಪೂರ್ಣ ಅಡಗುವವರೆಗೆ ಅವರು ಬಂಗಾಲದಿಂದ ಕಾಲು ಕಿತ್ತುವದಿಲ್ಲ. "ನಾನು ಇಡೀ ವರ್ಷ ಇಲ್ಲಿ ಇರಬಹುದು. ಪ್ರಸಂಗ ಬಂದರೆ ಪ್ರಾಣವನ್ನು ಅರ್ಪಿಸಬಹುದು. ಆದರೆ ನಾನು ಸೋಲನ್ನೆಂದಿಗೂ ಒಪ್ಪಲಾರೆ. ನಾನಿಲ್ಲಿ ಸದೇಹವಾಗಿ ಉಳಿಯುವದರಿಂದ ಜನರು ಕೇವಲ ನನ್ನ ಮೋರೆಯನ್ನು ನೋಡುತ್ತ ಕುಳಿತುಕೊಳ್ಳುವಂತಾದರೆ ಮಾತ್ರ ದೇವರು ಇಲ್ಲಿಯೆ ನನ್ನ ಕಣ್ಣು ಮುಚ್ಚಿಬಿಡುವದೊಳಿತು." ಅವರು ಮನಸಿನಲ್ಲಿ ಕಾಂಗ್ರೆಸ ಅಧಿವೇಶನಕ್ಕೆ ಹೋಗದಿರುವ ಸಿದ್ಧತೆಯನ್ನೂ ಮಾಡಿದ್ದರು. ಸೇವಾಗ್ರಾಮ ಮತ್ತು ಅವರ ಪ್ರೀತಿಗೆ ಪಾತ್ರವಾದ ಉರುಳಿ ಮುಂತಾದ ವಿಷಯಗಳ ಹೊಣೆಗಾರಿಕೆಯನ್ನೂ ಕುರಿತು ಅವರು ಆಲೋಚಿಸುತ್ತಿರಲಿಲ್ಲ.

ನೌಖಾಲಿಗೆ ಹೋಗಬೇಕೆಂದು ಮನಸಿನಲ್ಲಿ ಇಷ್ಟೊಂದು ಉದ್ವೇಗಪೂರ್ಣರಾಗಿದ್ದರೂ ತಮ್ಮ ಇಚ್ಛೆಯಂತೆ ತಾವು ಮರುದಿನವೇ ನೌಖಾಲಿಗೆ ತೆರಳುವದು ಅಶಕ್ಯವಾಗಿದೆಂಬು ಅವರು ನಾಲ್ಕನೆ ದಿನ ಪ್ರಾರ್ಥನಾ ಸಭೆಯಲ್ಲಿ ಹೇಳಿದರು. ಅಷ್ಟು ಬೇಗನೆ ನೌಖಾಲಿಗಾಗಿ ಗಾಡಿಯು ವ್ಯವಸ್ಥೆ ಆಗಲಾರದೆಂದು ಮುಖ್ಯ ಮಂತ್ರಿಗಳು ಹೇಳಿಕಳಿಸಿದ್ದರು. ಶನಿವಾರ ಇಲ್ಲವೆ ರವಿವಾರ ಹೊರಡುವ ಸಂಭವವಿದೆಂದರು. ಅಲ್ಲಿಯವರೆಗೆ ತಮ್ಮ ಕೈಲಾದಷ್ಟು ಜನತೆಯ ಸೇವೆ ಮಾಡುವದಾಗಿ ತಿಳಿಸಿದರು.

ಸೋದೆಪುರ ಪ್ಯಾರೇಲಾಲ

೧-೧೧-೪೬

# ಒಕ್ಕಲತನದಲ್ಲಿ ಕೃತ್ರಿಮ ಪದ್ಧತಿ

ಆರೋಗ್ಯ ರಕ್ಷಣೆಗಾಗಿ ಆರೋಗ್ಯಕರ ರೀತಿಯಲ್ಲಿ ಬೆಳೆದ ಆಹಾರ ಪದಾರ್ಥಗಳು ಅವಶ್ಯ. ಕೇವಲ ಅಂದ ಕಾಣುವ ಆಹಾರ ಪದಾರ್ಥಗಳಿಂದ ಆರೋಗ್ಯ ರಕ್ಷಣೆಯಾಗದೆಂದು ಇದೀಗ ಎಲ್ಲರೂ ಒಪ್ಪುತಿರುವ ಸಿದ್ಧಾಂತ. ಆರೋಗ್ಯಕರ ಆಹಾರ ಪದಾರ್ಥಗಳು ಆರೋಗ್ಯಕರ ಭೂಮಿಯನ್ನವಲಂಬಿಸುತ್ತವೆ. ಮನುಷ್ಯನ ಕೊಬ್ಬಿದ ದೇಹವು ಆರೋಗ್ಯದ ಲಕ್ಷಣವೆಂದು ಹೇಗೆ ಹೇಳಲಿಕ್ಕೆ ಬರುವದಿಲ್ಲವೊ ಅದೇ ರೀತಿ ಯಾವುದೊಂದು ಕಾಳಿನ ಆಕಾರ ಮತ್ತು ಹುಲಸು ಆರೋಗ್ಯ ರಕ್ಷಣೆಗೆ ನಿದರ್ಶಕವಲ್ಲ. ಕೃತಿಮ ಗೊಬ್ಬರವನ್ನು ಹಾಕಿ ಆಕಾರ ಮತ್ತು ಹುಲಸಿನ ದೃಷ್ಟಿಯಿಂದ ಬಹುಮಾನ ಸಿಕ್ಕುವಂತೆ ಬೆಳೆಸಲ್ಪಟ್ಟ ಕಾಳುಗಳಲ್ಲಿ ಕೆಲವೊಂದು ಮಹತ್ವದ ಅಂಶಗಳ ಅಭಾವವಿರುವದಲ್ಲದೆ ಈ ಪದಾರ್ಥಗಳಿಂದ ಪೋಷಿತವಾದ ಪ್ರಾಣಿಗಳು ರೋಗದ ಮತ್ತು ಕುಪೋಷಣದ ಲಕ್ಷಣಗಳನ್ನು ತೋರಿಸುತ್ತವೆ. ಕೃತ್ರಿಮ ಮತ್ತು ನೈಸರ್ಗಿಕ ಗೊಬ್ಬರದ ಸಂಬಂಧದಲ್ಲಿ ಇರುವ ವಿವಾದದಲ್ಲಿ ವಿಲ್ಪಶಾಯರದ ಒಳ್ಳೆ ಯಶಸ್ವಿಯಾದ ಒಕ್ಕಲಿಗ ಸಾಯಿಕ್ಸನು 'ಹುಮಸ್ ಆ್ಯಂಡ ಫಾರ್ಮರ' (ಫೆಬರ) ಎಂಬ ಪುಸ್ತಕ ಬರೆದು ಮಹತ್ವದ ಕಾಣಿಕೆ ಸಲ್ಲಿಸಿದ್ದಾನೆ.

ಎರಡು ವರುಷಗಳ ಹಿಂದೆ ಒಕ್ಕಲಿಗ ಸಾಯಿಕ್ಸ ಆಕಳು, ಹಂದಿ ಶರ್ಯತ್ತಿನ ಕುದುರೆಗಳನ್ನು ಸಾಕಿ ರಾಷ್ಟ್ರ ವಿಖ್ಯಾತ ಕೀರ್ತಿಯನ್ನು ಸಂಪಾದಿಸಿದ್ದನು. ಆದರೆ ಬಹಳ ದಿನಗಳ ಈ ಸಂಪಾದನೆ ದುರಂತದಲ್ಲಿ ಕೊನೆಗಂಡಿತು.

ನ್ಯುಜರಿವ್ಯೂ ಪತ್ರಿಕೆ ಹೀಗೆ ಬರೆಯುತ್ತದೆ. 'ಗೋಪಾಲಕರಿಗೆ ದಾರಿ ತೋರುವುದಕ್ಕಾಗಿ; ಅವರ ಸುವಿಖ್ಯಾತ ಕಪ್ಪು ಮತ್ತು ಬಿಳಿ ಫ್ರೀಜಿಯನ್ ದನಗಳನ್ನು ನೂತನ ಕ್ಷಯರೋಗ ಪರೀಕ್ಷಾಲಯಕ್ಕೆ ಕಳಿಸಲಾಯಿತು. ಆ ದನಗಳ ಹಾಲಿನ ಪ್ರಮಾಣ ಪ್ರಚಂಡ ರೀತಿಯಲ್ಲಿ ಹೆಚ್ಚಿದ್ದರೂ ಅವುಗಳಲ್ಲಿ ಎರಡು ಮೂರಾಂಶದಷ್ಟು ದನಗಳು ರೋಗಪೀಡಿತವಾಗಿವೆಂದು ಸಿದ್ಧವಾಯಿತು. ಕೃತ್ರಿಮ ಗೊಬ್ಬರದಿಂದ ಬೆಳೆಸಲ್ಪಟ್ಟ ಆಹಾರ ಪದಾರ್ಥಗಳನ್ನು ತಿಂದದ್ದರಿಂದ ಮತ್ತು ಅವರು ಹೊರಗೆ ಮಾರಿದ ನೈಸರ್ಗಿಕ ಪದಾರ್ಥಗಳನ್ನು ತಿನ್ನದೆ ಹಿಂಡಿ ಮೊದಲಾದವುಗಳನ್ನು ತಿಂದದ್ದರಿಂದ ಈ ರೀತಿ ಅವು ರೋಗಗ್ರಸ್ತವಾದುವೆಂಬುದು ಮನವರಿಕೆಯಾಯಿತು.

ಸ್ಯಾಲಿಸ್‌ಬರಿ ತೊಪ್ಪಲದ ಪೂರ್ವದಂಡೆಯಲ್ಲಿ ಸಾಯಿಕ್ಸ ಸರ್ವ ಶ್ರೇಷ್ಠ, ಫಾರ್ಮನ್ನು ಕೊಂಡು ೧೯೩೬ರಲ್ಲ ನೂತನ 'ನೈಸರ್ಗಿಕ' ಪದ್ಧತಿಯ ಮೇಲೆ ಮತ್ತೆ ಕಾರ್ಯ ಪ್ರಾರಂಭಿಸಿದ. ಅವನ ಬಡ ಹೊಲಗಳ ಹಾವಳಿಗೆ ತುತ್ತಾದ ಭೂಮಿಯನ್ನು ನೋಡಿ ಗೆಳೆಯನೊಬ್ಬ "ಇದೇನು" ಫಾರ್ಮ 'ಭೂಮಿಯಲ್ಲ ಮನೆಯ ಹೊರಗಿರುವ ಅಂಗಳ ಮಾತ್ರ' ಎಂದು ಉದ್ಗಾರತೆಗೆದನು. ಆದರೆ ಹತ್ತು ವರ್ಷಗಳಿಗಿಂತ ಕಡಿಮೆ ಅವಧಿಯಲ್ಲಿ ಆ ಇಳಕಲು ಕಪ್ಪು ಭೂಮಿ ಪ್ರಚಂಡ ಬೆಳೆಯಿತು. ವಿಕ್ರಮ ಪ್ರಾಣಿಗಳನ್ನು ಉತ್ಪಾದಿಸಿತು.

ಫ್ಯಾಕ್ಟರಿಗಳಲ್ಲಿಯ ದನಗಳ ಆಹಾರ ಪದಾರ್ಥಗಳಿಗೆ ಮತ್ತು ಕೃತ್ರಿಮ ಗೊಬ್ಬರಕ್ಕೆ ಅವನು ಬಹಿಷ್ಕಾರ ಹಾಕಿಬಿಟ್ಟ. ಭೂಮಿಯನ್ನು ಗಳೆಹೊಡೆದದ್ದರಿಂದ ಮೊದಲಿನ ರೋಗವೆಲ್ಲ ಮಾಯವಾಯಿ೨. ಒಳ್ಳೆ ಫಲವತ್ತಾದ ಸಾರ ಭೂಮಿಗೆ ಬಂತು. ದೂರ ಬೇರು ಇಳಿದ ಗಿಡಗಳಿಂದ ಮೇಲೆ ಬಂದ ಖನಿಜ ಪದಾರ್ಥಗಳು ಎರಡಡಿ ಗಳೆ ಹೊಡೆಯುವುದರಿಂದ ಕೆಳಗಿಳಿದವು. ಕಣಿಕಿಯನ್ನು ಮತ್ತು ಸುಗ್ಗಿಯನ್ನು ಮಾಡುವ ಹೊಸ ಪದ್ಧತಿಯಿಂದ ಕಣಿಕಿಯ ಸುಧಾರಣೆಯಾಗಿ ದನಗಳ ಮೇಲೆ ಒಳ್ಳೆ ಆಶ್ಚರ್ಯಕರ ಪರಿಣಾಮಗಳಾದವು.

ಎಲ್ಲಕ್ಕೂ ಮಹತ್ವದ್ದೆಂದರೆ ಗೆಳೆಯ ಸಾಯಿಕ್ಸ ತನ್ನ ಭೂಮಿಗೆ ಹೂಮಸ ಉಪಯೋಗಿಸಿದ. ಹೂಮಸ್ ಶಾಸ್ತ್ರೀಯ ಪದ್ಧತಿಯಿಂದ ಕಳಿತ ದನಗಳ ಮತ್ತು ವನಸ್ಪತಿಗಳ ಗೊಬ್ಬರ, ಭೂಮಿ ರಸಾಯನಿಕ ದ್ರವ್ಯಗಳಿಂದ ವಿಷಮಿಶ್ರಿತವಾಗದೆ. ಈ ಗೊಬ್ಬರದಿಂದ ಸಾರವುಳ್ಳದಾಯಿತು.

ಪ್ರಾಣಿಶಾಸ್ತ್ರ ದೃಷ್ಟಿಯಿಂದ ಭೂಮಿಯನ್ನು ನೋಡದೆ ರಸಾಯನಿಕ ದೃಷ್ಟಿಯಿಂದ ನೋಡುವದೊಂದು ಶಿಷ್ಟ ಸಮ್ಮತ ರೂಢಿ. ಇದನ್ನು ಸಾಯಿಕ್ಸ ಆಕ್ಷೇಪಿಸುತ್ತಾನೆ. ಔದ್ಯೋಗಿಕ ಹಿತಸಂಬಂಧವುಳ್ಳವರು ನೂರು ವರ್ಷ ಮಾಡಿದ ಪ್ರಚಾರದ ಪರಿಣಾಮವಾಗಿ 'ಈ ಕೃತ್ರಿಮ ಪ್ರವೃತ್ತಿ' ಮುಂದೆ ಬಂದಿದೆ. ಕೃತ್ರಿಮ ಗೊಬ್ಬರದಿಂದ ಉತ್ಪಾದಿತವಾದ ಆಹಾರದಿಂದ ಜೀವನ ಸತ್ತ್ವವೆಲ್ಲ ಹಾಳಾಗಿ ಹೋಗುವದು. ಬೇನೆಗಳನ್ನೆದುರಿಸುವ ಶಕ್ತಿಯೆ ಇಲ್ಲದಂತಾಗುವದು ಎಂದು ಸಾಯಿಕ್ಸರ ಅಭಿಪ್ರಾಯ.

ನಾಗರಿಕತೆ ಹಿಂದೆಂದೂ ಕಾಣದಂಥ ಭೀಷಣ ಪ್ರಸಂಗವಿದೀಗ ಬರಲಿದೆ. ಜಗತ್ತಿನ ಪ್ರತಿಯೊಂದು ದೇಶದಲ್ಲಿ ಭೂಮಿಯ ಸಾರವೆಲ್ಲ ಹಾಳಾಗಿ ಅವುಗಳ ಹುಲಸು ಹಳೆಯ ಮಾತಾಗಿ ಹೋಗುವ ಕಾಲ ಮಾನವರನ್ನೆದುರಿಸುತಿದೆಂದು ಅವನ ಅಭಿಪ್ರಾಯ. ಭಾವೀ ದುರಂತದ ಭೀಕರ ಚಿತ್ರದ ಬಗ್ಗೆ ಸಾಯಿಕ್ಸ ಹೇಳುವ ಕೃತ್ರಿಮ ಪದ್ಧತಿಗಳಿವು.

ಕೃತ್ರಿಮ ಪದ್ಧತಿಯಿಂದ ಬೀಜಬಿತ್ತುವದು ಒಕ್ಕಲತನದ ಶಾಸ್ತ್ರೀಯ ಪದ್ಧತಿಯೆಂದು ಕರೆಯಲ್ಪಡುವ ಪದ್ಧತಿಗಳಲ್ಲಿ ಅತ್ಯಂತ ಅಪಾಯಕಾರಕ ಪದ್ಧತಿ.

ಸಮುದ್ರಕ್ಕೆ ಬಳಿದು ಹೋಗುತಿರುವ ನಗರಗಳ ಗೊಬ್ಬರದಿಂದ ಬಹಳ ಹಾಳು. ಈ ಎಲ್ಲ ಗೊಬ್ಬರದ ಉಪಯೋಗ ಭೂಮಿಗೆ ಅಗತಕ್ಕದ್ದು. ಕೃತ್ರಿಮ ರೀತಿಯಿಂದ ಒಣಗಿಸಲ್ಪಟ್ಟ ಧಾನ್ಯಗಳಿಂದ ಅನೇಕ ಸಲ ರೊಟ್ಟಿ ಮಾಡಲಿಕ್ಕೆ ಬರುವದಿಲ್ಲ. ಬಿಳಿ ಬ್ರೆಡ್‌ನ್ನು ಪ್ರಚಾರದಲ್ಲಿ ತರುವದೊಂದು ಹೆಣ್ಣುಮಗಳಲ್ಲಿಯ ಬಂಜೆತನವಿದ್ದಂತೆ. ಪೂರ್ಣ ಗೋದಿ ಬ್ರೆಡ್‌ನ್ನು ತಿನ್ನುವ ಸುದಿನ ಬೇಗನೆ ಬರುವದಕ್ಕಿಂತ ಮಹತ್ವದ ಸಂಗತಿ ಮನುಷ್ಯನಿಗೆ ಮತ್ತೊಂದಿಲ್ಲ.

ಹುಲ್ಲನ್ನು ಮತ್ತೆ ಭೂಮಿಯಲ್ಲಿ ಹರುವುದನ್ನು ಬಿಟ್ಟು ಅದನ್ನು ಸುಡುವದು ಒಕ್ಕಲಿಗ ಮಾಡುವ ಹೀನ ಅಪರಾಧಗಳಲ್ಲಿ ಅತ್ಯಂತ ಮಹತ್ವದ್ದು.

ಅನೇಕ ಒಕ್ಕಲಿಗರು' ತಮ್ಮ ಆಕಳುಗಳನ್ನು ವರ್ಷದಲ್ಲಿ ೫ ತಿಂಗಳು ಗೋದಲಿಯಲ್ಲಿ ಬಿಗಿದಿಡುತ್ತಾರೆ. ಮತ್ತು ಹಿಂಡಿಯಂಥ ಪುಷ್ಟ ಹಾರವನ್ನು ಕೊಡುತ್ತಾರೆ. ಇದರಿಂದ ಆಕಳುಗಳ ಜೀರ್ಣ ಶಕ್ತಿಯನ್ನು ಕೂಡ ಲಕ್ಷಿಸುವುದಿಲ್ಲ. ಇಂಥ ದನಗಳು ನಿರೋಗಿ ಉಳಿಯಬೇಕೆಂದು ಅವರು ಅಪೇಕ್ಷಿಸುವುದಾದರೂ ಎಂತು ?

ಹೊಸದಿಲ್ಲಿ ಪ್ಯಾರೇಲಾಲ

೧೪-೧೦-೪೬

## ಟೀಕೆ ಟಿಪ್ಪಣಿಗಳು

( ೭ ನೇ ಪುಟದಿಂದ)

ದರೂ, ೧೨೫ ಗಜಗಳಷ್ಟು ಬಟ್ಟೆ ಉತ್ಪತ್ತಿ ಒಬ್ಬ ನೇಕಾರನಿಂದ ಆಗಬಹುದು. ೯೦೦೦ ಲಕ್ಷ ಗಜ ಬಟ್ಟೆ ನೇಯಲು ೭ ಲಕ್ಷಮಗ್ಗಗಳು ಬೇಕು. ಸದ್ಯಕ್ಕೆ ಬಟ್ಟೆಯನ್ನು ನೇಯುವ ಕೈಮಗ್ಗಗಳ ಸಂಖ್ಯೆ ಮದ್ರಾಸ ಪ್ರಾಂತದಲ್ಲಿ ೫ ಲಕ್ಷ ಮತ್ತು ಮೇಲೆ ಕೆಲವು ಸಾವಿರ ಇರುವದು. ಅದುದರಿಂದ ಬಟ್ಟೆಯ ವಿಷಯದಲ್ಲಿ ಅದೂ ಖಾದೀ ಮೂಲಕವೇ— ಮದ್ರಾಸ ಪ್ರಾಂತವು ಸ್ವಾವಲಂಬಿಯಾಗಬೇಕಿದ್ದರೆ— ಕನಿಷ್ಟ ೭೫ ಸಾವಿರ ಕೈಮಗ್ಗಗಳನ್ನಾದರೂ ಹೆಚ್ಚಿಸಬೇಕಾಗುವದು.' ತಮ್ಮ ರಾಷ್ಟ್ರಮಾತೆಯ ಪ್ರೇಮದಿಂದ, ೮ ಜನರಲ್ಲಿ ೫ ಜನರು ದಿನಾಲು ಒಂದು ತಾಸು ನೂಲುವಂಥವರು ಸಿಗುತ್ತಾರೆಂದು ಅಪೇಕ್ಷಿಸುವದು ಹೆಚ್ಚಾದೀತೆ?

ಹೊಸದಿಲ್ಲಿ ಮೋ. ಕ. ಗಾಂಧಿ



# ಕ ರ್ನಾ ಟ ಕ

### ಧಾರವಾಡ

ತಮ್ಮ ಅಂಗಡಿ ಮುಂದೆ ಪಿಕೆಟಿಂಗ ಮಾಡಿ ಗಲಾಟೆ ಮಾಡಿದರೆಂದು ಹುಬ್ಬಳ್ಳಿ ಕಂಚುಗಾರ ಓಣಿಯಲ್ಲಿರುವ ದುರ್ಗಾ ಕೆಫೆಯ ಒಡೆಯರಾದ ಸುಬ್ರಾವ ಇಂದ್ರಾಳಿಯವರು ಹುಬ್ಬಳ್ಳಿ ಸಬ್ ಜಜ್ಜ ಕೋರ್ಟಿನಲ್ಲಿ ಮಾಡಿದ ನಷ್ಟ ಪರಿಹಾರ ದಾವೆಯಲ್ಲಿ ಪ್ರತಿವಾದಿ ಶ್ರೀ ಉಪಾಧ್ಯಾಯ ಮೊನ್ನಯ್ಯ, ಮೊದಲಾದ ೪ ಜನರು ೯೦ ರೂಪಾಯಿ ನಷ್ಟ ಪರಿಹಾರ ಕೊಡಕೂಡಬೇಕೆಂದು ನಿರ್ಣಯಿಸಲಾಯಿತು.

ಹಿರೇಕೆರೂರ ತಾಲೂಕಿನ ದಕ್ಷಿಣ ಭಾಗದ ಕೆಲ ಹಳ್ಳಿಗಳಲ್ಲಿ ಹುಲಿಗಳ ಉಪದ್ರವ ಹೆಚ್ಚಾಗಿದೆ. ೨೬ ನೇ ತಾರೀಕು] ಪೋಲೀಸ ಜಮಾದಾರ ನರೋನಾ ಇವರು ಒಂದು ಹುಲಿಯನ್ನು ಗುಂಡಿಕ್ಕಿ ಕೊಂದಿದ್ದಾರೆ.

ಕಳೆದ ೫ ವರುಷಗಳಿಂದ ಅಖಿಲ ಭಾರತ ಚರಕ ಸಂಘದ ಕರ್ನಾಟಕ ಶಾಖೆಯ ಕಾರ್ಯದರ್ಶಿಗಳಾಗಿದ್ದ ಶ್ರೀ ಕೆ. ಎ. ವೆಂಕಟರಾಮಯ್ಯನವರು ನಿವೃತ್ತರಾಗಿ ಶ್ರೀ ವೆಂಕಟೇಶ ರಾಮಚಂದ್ರ ವಡವಿಯವರು ಕಾರ್ಯದರ್ಶಿಗಳಾಗಿ ನೇಮಿಸಲ್ಪಟ್ಟಿರುವರು. ಖಾದಿ ಕೆಲಸಗಾರರು ಶ್ರೀ ವೆಂಕಟರಾಮಯ್ಯನವರನ್ನು ಬೀಳ್ಕೊಟ್ಟರು.

ರಜಿಸ್ಟರ ಆಗದೇ ಇದ್ದ ವೈದ್ಯರ ಸಮ್ಮೇಲನ ೧೩-೧೧-೪೬ ಕ್ಕೆ ನಾಸಿಕದ ಬಿಂದುಮಾಧವ ಶಾಸ್ತ್ರಿ ಪಂಡಿತ ಇವರ ಅಧ್ಯಕ್ಷತೆಯಲ್ಲಿ ಹುಬ್ಬಳ್ಳಿಯಲ್ಲಿ ಕೂಡುವದು.

ನೌಖಾಲಿ ತಿಪ್ಪೇರಾಗಳ ಸಂತ್ರಸ್ತರ ಸಹಾಯಕ್ಕಾಗಿ ಹುಬ್ಬಳ್ಳಿಯ ಕೆಲ ವ್ಯಾಪಾರಿಗಳು ೨೦೪ ರೂ. ಗಳನ್ನು ಕೂಡಿಸಿದ್ದು ಅವುಗಳನ್ನು ಬಂಗಾಲ ಪ್ರಾಂತಿಕ ಕಾಂಗ್ರೆಸ ಕಮಿಟಿಗೆ ಕಳಿಸಲಾಗಿದೆಂದು ಶ್ರೀ ಜ. ಸಿ. ಕೆಂಪಣ್ಣನವರು ತಿಳಿಸುತ್ತಾರೆ.

ಧಾರವಾಡ ಜಿಲ್ಹಾ ಕಾಂಗ್ರೆಸ್ ಸಮಿತಿಗಳ ಪದಾಧಿಕಾರಿಗಳ ಪರಿಷತ್ತು ಶ್ರೀ ವೈಕುಂಠಲಾಲರಿಂದ ಪ್ರಾರಂಭವಾಯಿತು. ಕಾಂಗ್ರೆಸ ಸರಕಾರಗಳ ಯೋಜನೆಗಳ ಉಪಯೋಗ ಜನತೆಗಾಗುವಂತೆ ಕಾಂಗ್ರೆಸ್ ಸಮಿತಿಗಳು ಯತ್ನಿಸಬೇಕು. ಕಾಂಗ್ರೆಸ್ ಸಮಿತಿಗಳನ್ನು ಸುವ್ಯವಸ್ಥಿತಗೊಳಿಸಬೇಕು. ಎತ್ತುವಳಿ ಧೋರಣೆಯಿಂದ ರೈತರಿಗಾಗುವ ಅನಾನುಕೂಲತೆಗಳನ್ನು ಲಕ್ಷಿಸಿ ಲೆವಿ ಕಮೀಟಿಯೊಂದನ್ನು ಸ್ಥಾಪಿಸಿ ಅದರ ಸಲಹೆಯಂತೆ ನಡೆಯಬೇಕೆಂಬ ಬಗ್ಗೆ ಗೊತ್ತುವಳಿಗಳಾದವು.

### ವಿಜಾಪುರ

ವಿಜಾಪುರದಲ್ಲಿ ಪ್ಲೇಗು ದಿನಾಲು ಹಬ್ಬುತ್ತದೆ. ದಿನಾಲು ಒಂಡೆರಡು ಬೇನೆ ತಗಲಿದ ವರದಿ ಇದೆ. ಅಕ್ಟೋಬರ ೩೦ ರ ವರೆಗೆ ಒಟ್ಟಿಗೆ ೬೪ ಜನರಿಗೆ ಬೇನೆ ಬಂದಿದ್ದು ೨೫ ಜನರು ಮರಣ ಹೊಂದಿರುವರು. ೩೨೪೦೨ ಜನರಿಗೆ ಪ್ಲೇಗಿ ಚುಚ್ಚಲಾಗಿದೆ. ನಗರದಲ್ಲಿಯ ಮನೆಗಳನ್ನೆಲ್ಲ ಶುದ್ಧ ಮಾಡುವದು ನಡೆದಿದೆ.

ಗುಳೇದಗುಡ್ಡದ ಸರಕಾರಿ ವಖಾರದಿಂದ ಕಳ್ಳತನದಿಂದ ಕಾಳು ಸಾಗಿಸುತಿದ್ದರೆಂದು ಗೋಡೌನಕೀಪರ ಶ್ರೀ ವಾಸಪ್ಪಾ ಕುಲಕರ್ಣಿ ಸಾತಪ್ಪ ಒಣಕುದರಿ ಮತ್ತು ಒಬ್ಬ ಹಮಾಲನನ್ನು ಸೆರೆಹಿಡಿದು ಬಾಗಲಕೋಟೆಗೆ ಕಳಿಸಿದರೆಂದು ತಿಳಿಯುತ್ತದೆ.

ಗುಳೇದಗುಡ್ಡ ಮುನಸಿಪಾಲಟಿಯ ನೋಕರರಿಗೆ ೩ ತಿಂಗಳ ಸಂಬಳ ಮತ್ತು ತುಟ್ಟಿ ಭತ್ತೆ. ಸಿಕ್ಕದೆ ಅವರು ಬಹಳ ತೊಂದರೆಗೀಡಾಗಿರುವರೆಂದು ತಿಳಿಯುತ್ತದೆ.

ಹೂವಿನಹಿಪ್ಪರಗಿಯ ಜಿ. ಜಿ. ಬ್ಯಾಕೋಡ ಇವರ ಅಂಗಡಿ ಕಳೆದವಾರ ಕಳವಾಗಿ ೫—೬ ಸಾವಿರ ರೂಪಾಯಿಗಳ ಮಾಲು ಹೋಗಿದೆ ಪೋಲೀಸರು ಶೋಧ ನಡೆಸಿದ್ದಾರೆ.

ಮುದ್ದೇಬಿಹಾಳದಲ್ಲಿ ೩೦ ನೇ ತಾರೀಕು ಮಾಮಲೇದಾರರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಹೆರಿಗೆ ಆಸ್ಪತ್ರಿ ಹಾಗು ಶಿಶುಕಲ್ಯಾಣ ಕೆಂದ್ರ ಸ್ಥಾಪಿಸುವ ಬಗ್ಗೆ ವಿಚಾರವಾಗಿ ಒಂದು ಸಮಿತಿ ಸ್ಥಾಪಿತವಾಯಿತು.

### ಬೆಳಗಾವಿ

ಬೆಳಗಾವಿ ಜಿಲ್ಹಾ ಕಾಂಗ್ರೆಸ ಕಮೀಟಿ ಅಧ್ಯಕ್ಷ ಶ್ರೀ ಶೇಖ ಸಾಹೇಬರು ನಂದಗಡ ಬೆಣಚಿನಮರಡಿ ಕರೋಸಿ ಯಮಕನಮರಡಿ ತೇರದಾಳ ಮಂಗಸೂಳಿ ಮಹಾಲಿಂಗಪುರ ಮೊದಲಾದ ಗ್ರಾಮಗಳಲ್ಲಿ ಸಂಚರಿಸಿ ಹಿಂದು ಮುಸಲ್ಮಾನ ಐಕ್ಯ ಮತ್ತು ಸದ್ಯದ ರಾಜಕೀಯ ಪರಿಸ್ಥಿತಿಯ ಬಗ್ಗೆ ಭಾಷಣ ಮಾಡಿದರು. ಇದೇ ರೀತಿ ಪ್ರತಿಯೊಂದು ತಾಲೂಕಿನಲ್ಲಿ ಸಂಚಾರ ಮಾಡುವವರಿದ್ದಾರೆ.

ನೌಖಾಲಿ ಆಪದ್ಗ್ರಸ್ತರಿಗೆ ಸಹಾಯ ನೀಡಿರೆಂದು ಬೆಳಗಾವಿಯ ಯುವಕ ಸಂಘದ ಹೆಸರಿನಿಂದ ಪತ್ರಿಕೆ ತೆಗೆದು ಹಣ ಕೂಡಿಸುತಿದ್ದಾನೆಂದು ಳಳಕವಾಡಿಯ ಶ್ರೀ ಅಠವಲೆಯೆಂಬ ಯುವಕನನ್ನು ಸಂಘದವರು ಹಿಡಿದು ಪೋಲೀಸ ವಶಪಡಿಸಿದ್ದಾರೆ. ಈವರೆಗೆ ೫೬ ರೂಪಾಯಿ ಅವನು ಕೂಡಿಸಿರುವನಂತೆ. ಅವನ ಕಡೆಗಿದ್ದ ಪಾವತಿಗಳನ್ನು ಜಪ್ತ ಮಾಡಲಾಗಿದೆ.

ಬೆಳಗಾವಿ ಹನುಮಾನ ಬೀದಿಯಲ್ಲಿ ಶ್ರೀ ಚಂದುರಾವ ಕುಲಕರ್ಣಿಯವರ ಔಷಧ ಅಂಗಡಿಗೆ ೧ ನೇ ತಾರೀಕು ರಾತ್ರಿ ಬೆಂಕಿ ಹತ್ತಿ ಸ್ವಲ್ಪ ಹೊತ್ತಿನಲ್ಲಿಯೇ ಹಬ್ಬಿತು. ೫—೬ ಸಾವಿರ ರೂಪಾಯಿ ಹಾನಿಯಾಯಿತು. ವಿದ್ಯುದ್ದೀಪದ ಸ್ವಿಚ್ ಹಾರಿ ಈ ಅಪಘಾತ ಸಂಭವಿಸಿತಂತೆ.

ಧಾನ್ಯದ ಎತ್ತುವಳಿ ಹೋದ ಸಲದಂತೆ ಈ ಸಲವೂ ನಡೆಯುವದಾಗಿ ಬೆಳಗಾವಿ ಜಿಲ್ಹಾ ಕಲೆಕ್ಟರರು ಪತ್ರಿಕಾ ಪ್ರತಿನಿಧಿಗಳ ಸಭೆಯಲ್ಲಿ ಹೇಳಿದರು. ಶ್ರೀ ಜಾಫರ ಫೌಜದಾರರ ಮೇಲೆ ಲಂಚದ ಆರೋಪದ ಖಟ್ಲೆ ಹಾಕಲು ಸಾಕಷ್ಟು ಆಧಾರಗಳಿಲ್ಲೆಂದು ಸರಕಾರೀ ವಕೀಲರು ತಿಳಿಸಿದರೆಂದು ಕಲೆಕ್ಟರರು ಹೇಳಿದರು.

೨೩೦ ವಾರ ಬಟ್ಟೆಯನ್ನು ಗೋವೆಗೆ ಸಾಗಿಸುತಿದ್ದಾಗ ಲೋಂಡಾ ರೋಡಿನ ಮೇಲೆ ಖಾನಾಪುರ ತಾ. ಕಾಂಗ್ರೆಸ್ ಕಮೀಟಿಯ ಸಹಕಾರ್ಯಕರ್ತರು ಹಿಡಿದು ಪೋಲೀಸ ಗೌಡರಿಂದ ಪಂಚನಾಮೆ ಮಾಡಿಸಿದರೆಂದು ತಿಳಿಯುತ್ತದೆ.

ಅಂಕಲಗಿಯಲ್ಲಿ ೨೯ ನೇ ತಾರೀಕು ಕುಂದರನಾಡಿನ ರೈತ ಪರಿಷತ್ತು ಶ್ರೀ ಅಡವಿ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಜರುಗಿತು. ಶ್ರೀ ಪುಂಡಲೀಕ ಕಾತಗಡೆ ಅಡಿವೆಪ್ಪಾ ಮೂಲೀಮನಿ, ಚನ್ನಪ್ಪಾ,ವಾಲಿ ತಲ್ಲೂರ ರಾಯನಗೌಡರು ಮತ್ತು ಅಡವಿ ಸ್ವಾಮಿಗಳು ಭಾಷಣ ಮಾಡಿದರು. ಜನತಾಸರಕಾರ ಸ್ಥಾಪಿತವಾಗಿದೆ. ರೈತ ಹಿತದ ಕಾರ್ಯಗಳು ಅನೇಕ ಮುಖವಾಗಿ ಸಾಗಬೇಕೆಂದು ಅವರು ಹೇಳಿದರು.

ಖಾನಾಪುರ ತಾಲೂಕಿನ ಕನ್ನಡ ಕಾರ್ಯಕರ್ತರ ಸಭೆ ೧ ನೇ ತಾರೀಕು ಖಾನಾಪುರದಲ್ಲಿ ಡಾ. ತೆರಗುಂಡ್ಡಿಯವರ ಅಧ್ಯಕ್ಷತೆಯಲ್ಲಿ ಸೇರಿದ್ದಿತು ಖಾನಾಪುರ ತಾಲೂಕಿನಬಗ್ಗೆ ಮರಾಠಿಗರು ಮಾಡುತಿದ್ದ ಅಪಪ್ರಚಾರಕ್ಕೆ ತಡೆ ಹಾಕಿ ಸಂಘಟನೆ ಮಾಡಿಕೊಳ್ಳಲು ಖಾನಾಪುರ ತಾಲೂಕು ಏಕೀಕರಣ ಸಂಘ ಸ್ಥಾಪಿಸಲಾಯಿತು. ಶ್ರೀ ಬಸಪ್ಪಾ ಅರಗಾವಿಯವರು ಅಧ್ಯಕ್ಷರಾಗಿ ಆರಿಸಲ್ಪಟ್ಟರು. ವಾಮನರಾವ ಕುಲಕರ್ಣಿಯವರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟು ಮರಾಠಿಗರ ಅಪಪ್ರಚಾರವನ್ನು ನಿಷೇಧಿಸಲಾಯಿತು. ಡಿಸೆಂಬರ ೧ ನೇ ವಾರದಲ್ಲಿ ಬೆಳಗಾವಿ ಜಿಲ್ಹಾ ಏಕೀಕರಣ ಪರಿಷತ್ತನ್ನು ಖಾನಾಪುರದಲ್ಲಿ ಕೂಡಿಸಬೇಕೆಂದು ಗೊತ್ತಾಯಿತು.

ಕುಕನೂರಲ್ಲಿ ದತ್ತ ಸಂಸ್ಥೆಯ ಗುರುದ್ವಾದಶಿಯ ಮಹೋತ್ಸವ ಆಶ್ವಿನ ಬಹುಳ ಪ್ರತಿಪದೆಯಿಂದ ತ್ರಯೋದಶಿಯ ವರೆಗೆ ಮಹಾರುದ್ರಾಭಿಷೇಕ ಗೋಪಾಳ ಕಾವಲಿ ಅನ್ನಸಂತರ್ಪಣೆಗಳೊಂದಿಗೆ ಜರುಗಿತು. ಪುರಾಣ ಪಾರಾಯಣ ಕೀರ್ತನ ಕಾರ್ಯಕ್ರಮ ಯಶಸ್ವಿಯಾಗಿ ಜರುಗಿದವು.

### ಉತ್ತರ ಕನ್ನಡ

ಕಳೆದ ೨೮ ನೇ ತಾರೀಕು ಸಿರಸಿಯಲ್ಲಿ ಲಂಚ ನಿರ್ಮೂಲನ ಶಾಖೆಯವರು ಇಲೆಕ್ಟ್ರಿಕ್ ಇನಸ್ಪೆಕ್ಟರೊಬ್ಬರರು ಲಂಚ ತೆಗೆದುಕೊಂಡಾಗ ಹಿಡಿದು ಪಂಚನಾಮೆ ಮಾಡಿದ್ದಾರೆ. ಅವರನ್ನೀಗ ಜಾಮೀನ ಮೇಲೆ ಬಿಟ್ಟಿರುತ್ತಾರೆ.

ಅಂಕೋಲೆಯಲ್ಲಿ ಶ್ರೀ ಮಾವಿನಕುರ್ವೆಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಶ್ರೀ ವಿ ಕೆ ಜವಳಿಯವರ ಭಾಷಣವಾಯಿತು. ಏಕೀಕರಣ ಸಂಘವನ್ನು ಸ್ಥಾಪಿಸಿಕೊಂಡು ಕೆಲಸ ಮಾಡಬೇಕೆಂದು ಗೊತ್ತಾಯಿತು.

ಸಿದ್ದಾಪುರದಿಂದ ೫ ಮೈಲು ದೂರ ಇರುವ ಕಾನಗೋಡ ಎಂಬ ಹಳ್ಳಿಯಲ್ಲಿ ೧ ನೇ ತಾರೀಕು ಅಕಸ್ಮಾತ್ತಾಗಿ ಬೆಂಕಿ ಬಿದ್ದು ೨೭ ಮನೆಗಳು ಭಸ್ಮವಾದವು. ೩೫ ಕುಟುಂಬಗಳ ಸುಮಾರು ೩೦೦ ಜನರು ನಿರಾಶ್ರಿತರಾಗಿರುವರು. ಒಬ್ಬ ಹೆಣ್ಣುಮಗಳು ಒಂದು ಆಕಳು ಒಂದು ಕರು ಸತ್ತಿರುವವು. ಮಾಮಲೇದಾರರು ನಿರಾಶ್ರಿತರಿಗೆ ೧ ಚೀಲ ಅಕ್ಕಿಯನ್ನು ಹಂಚಿದ್ದಲ್ಲದೆ ನಿಧಿ ಕೂಡಿಸುತ್ತಿರುವರು.

ಕಾರವಾರ ಕರ್ನಾಟಕ ಸಂಘದವರು ೩೦ ನೇ ತಾರೀಕು ಸಾಯಂಕಾಲ ಉಪಮಂತ್ರಿ ಶ್ರೀ ಗಾವಕಾರರಿಗೆ ಸ್ವಾಗತವಿತ್ತು ಸನ್ಮಾನಿಸಿದರು. ಗಾವಕಾರರು ೧॥ ಗಂಟೆ ಭಾಷಣ ಮಾಡಿ ಮಂತ್ರಿಮಂಡಳದ ಧೋರಣವನ್ನು ವಿವರಿಸಿದರು. ಹೊಲಸಾಗುವಳಿ ಕಾನೂನಿನ ಬಗ್ಗೆ ಉಂಟಾದ ತಪ್ಪು ತಿಳುವಳಿಕೆ ಹೋಗಲಾಡಿಸಲು ಪ್ರಯತ್ನಿಸಿದರು.

ಮುಂಬೈ ಸರಕಾರದ ಉಪಮಂತ್ರಿಗಳಾದ ಶ್ರೀ ಗಾವಕಾರರು ಸಿರಸಿಗೆ ಆಗಮಿಸಿ ಶ್ರೀ ಕೇಶವೈನರ ಅಧ್ಯಕ್ಷತೆಯಲ್ಲಿ ಸೇರಿದ್ದ ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡಿದರು. ರೇಲ್ವೆ ಮಾರ್ಗ ಹಾಕಲು ಕಾರಖಾನೆಗಳನ್ನು ತೆರೆಯಲು ವಿನಂತಿಸಲು ಶ್ರೀ ಗಾವಕಾರರು ಅದಕ್ಕಾಗಿ ಯತ್ನಿಸುವುದಾಗಿ ಹೇಳಿದರು.

ಮುಂಡಗೋಡ ತಾಲೂಕ ಮಳಗಿಯಲ್ಲಿ ೨೫ ನೇ ತಾರೀಕು ರಾಷ್ಟ್ರಸೇವಾದಳದ ಸ್ವಯಂಸೇವಕರು ನೌಖಾಲಿ ತಿಪ್ಪೇರಾಗಳಲ್ಲಿಯ ಅತ್ಯಾಚಾರದ ಬಗ್ಗೆ ಹರತಾಳ ಆಚರಿಸಿದರು. ದೀಪಾವಳಿಯನ್ನು ನಿರಾಡಂಬರವಾಗಿ ಆಚರಿಸಿದರು. ಸಾಯಂಕಾಲ ಸಭೆ ಸೇರಿ ಅತ್ಯಾಚಾರಗಳನ್ನು ನಿಷೇಧಿಸುವ ಠರಾವು ಸ್ವೀಕೃತವಾದವು.

### ಬಳ್ಳಾರಿ

ಹೊಸಪೇಟೆ ಮ್ಯುನಿಸಿಪಲ್ ಹಾಯಸ್ಕೂಲಿನ ಬೆಳ್ಳಿ ಹಬ್ಬವನ್ನು ಇದೇ ಡಿಸೆಂಬರದ ಒಳಗಾಗಿ ಮಾಡಬೇಕೆಂಬ ಯೋಜನೆ ಇದೆ. ಆದುದರಿಂದ ಈ ಹಾಯಸ್ಕೂಲಿನ ಹಳೆಯ ವಿದ್ಯಾರ್ಥಿಗಳು ಆಶ್ರಯದಾತರು ಉದಾರ ಕಾಣಿಕೆ ಕೊಡಬೇಕ್ಕಾಗಿ ಉತ್ಸವ ಸಮಿತಿಯವರು ಬಿನ್ನವಿಸುತ್ತಾರೆ. ೫೦೦೦ ರೂಪಾಯಿ ಕೂಡಿಸಿ ಬೆಳ್ಳಿ ಹಬ್ಬದ ಸ್ಮಾರಕವಾಗಿ ಶಿಷ್ಯವೃತ್ತಿಗಳನ್ನು ಕೊಡಬೇಕೆಂದು ಯೋಜಿಸಲಾಗಿದೆ.

ಕೊಟ್ಟೂರಿನಲ್ಲಿ ೩ ನೇ ತಾರೀಕು ವಿದ್ಯಾರ್ಥಿ ಕಾಂಗ್ರೆಸ್ ಭವನದ ಉದ್ಘಾಟನಾ ಸಮಾರಂಭ ಪಿ. ಸಿ. ರಾಘವೇಂದ್ರರಾವ ಇವರ ಹಸ್ತದಿಂದ ನೆರವೇರಿಸಲ್ಪಟ್ಟಿತು. ಮತ್ತು ವಿದ್ಯಾರ್ಥಿಗಳ ಕರ್ತವ್ಯದ ಬಗ್ಗೆ ಭಾಷಣಗಳಾದವು. ಮದ್ಯಪಾನ ನಿರೋಧಾಧಿಕಾರಿಗಳಾದ ಶ್ರೀ ವರ್ಮಾ ಇವರು ಆ ಬಗ್ಗೆ ಮಾತಾಡಿದರು. ಸಂಘಕ್ಕಾಗಿ ಕೆಲವರು ಧನಸಹಾಯ ಮಾಡಿದರು. ಒಟ್ಟು ೬೩ ರೂಪಾಯಿ ಕೂಡಿದೆ.

ಸಾಂಗಲಿಯಲ್ಲಿ ಶನಿವಾರ ರಾತ್ರಿ ಇರಿತಗಳಾದವು. ಇರಿಯಲ್ಪಟ್ಟವರಲ್ಲಿ ಇಬ್ಬರು ಮಿರಜಿ ಆಸ್ಪತ್ರೆಯಲ್ಲಿ ಸತ್ತರು. ನಾಗರಿಕರ ಸಭೆ ಸೇರಿ ಈ ಘಟನೆಯನ್ನು ನಿಷೇಧಿಸಲಾಯಿತು. ರಾಜೇಸಾಹೇಬರು ಈ ಸಭೆಗೆ ಸಂದೇಶ ಕಳಿಸಿ ಗುಂಡರನ್ನು ಶಾಶಿಸುವುದಾಗಿ ಹೇಳಿರುವರು.

### ಕನ್ನಡ ಸಂಸ್ಥಾನ

ಅರಸೀಕೆರಿ ವ್ಯಾಪಾರಸ್ಥರು ದೀಪಾವಳಿಯನ್ನು ಏನೂ ಆಡಂಬರವಿಲ್ಲದೆ ಆಚರಿಸಿ ಪೂರ್ವ ಬಂಗಾಲ ದುರಂತದಲ್ಲಿ ನಿರಾಶ್ರಿತರಾದವರ ಸಹಾಯಕ್ಕೆ ೧೦೦೦ ರೂಪಾಯಿ ಕಳಿಸಿದರೆಂದು ತಿಳಿಯುತ್ತದೆ.

ಜಮಖಂಡೀ ಸಂಸ್ಥಾನ ಸ್ವರಾಜ್ಯ ಪತ್ರಿಕೆಯಿಂದ ತೆಗೆದುಕೊಂಡ ೨೦೦೦ ರೂಪಾಯಿ ಜಾಮೀನ ಹಣವನ್ನು ಸರಕಾರದವರು ತಿರುಗಿ ಕೊಟ್ಟಿರುವರು.

ಜಮಖಂಡಿ ಪ್ರಜಾಪರಿಷತ್ತಿನ ಕಾರ್ಯಕರ್ತರು ದಕ್ಷಿಣ ಸಂಸ್ಥಾನಗಳ ಒಕ್ಕೂಟದ ಯೋಜನೆಯ ಹಾಗು ನಡುಗಾಲ ಸರಕಾರ ಸ್ಥಾಪನೆಯ ಸಮಸ್ಯೆಗಳನ್ನು ಚರ್ಚಿಸುತಿದ್ದಾರೆ.

ದಕ್ಷಿಣ ಸಂಸ್ಥಾನಗಳ ಒಕ್ಕೂಟದ ಬಗ್ಗೆ ಹೆಚ್ಚಿನ ವಿಚಾರವಿನಿಮಯ ಮಾಡಲು ಇದೇ ೯ ನೇ ತಾರೀಖಿಗೆ ಕೂಡಲಿದ್ದ ದಕ್ಷಿಣ ಸಂಸ್ಥಾನಿಕರ ಹಾಗು ಆ ಸಂಸ್ಥಾನಗಳ ಪ್ರಾದೇಶಿಕ ಉಪಸಮಿತಿಗಳ ಸಭೆಯನ್ನು ಶ್ರೀ ಶಂಕರರಾವ ದೇವ ಇವರು ಕೆಲ ಕಾರಣಗಳ ಮೂಲಕ ಅನಿಯಮಿತ ಅವಧಿಯವರೆಗೆ ಮುಂದರಿಸಿದರು.

ಗುಡಗೇರಿ ಸಂಸ್ಥಾನದ ಪ್ರಜಾಪರಿಷತ್ತಿನ ಕಾರ್ಯಕಾರಿ ಸಮಿತಿಯ ಸಭೆ ಸೇರಿ ಶ್ರೀ ಬಿ. ವಿ. ಶಿಖರೆಯವರು ಒಕ್ಕೂಟದ ಉಪಯುಕ್ತತೆಯನ್ನು ತಿಳಿಸಿ ಹೇಳಿದರು. ಗುಡಗೇರಿ ತಾಲೂಕ ಪ್ರತಿನಿಧಿಗಳು ಯೋಜನೆಯನ್ನು ವಿರೋಧಿಸಿದರು.

ಮುಟಮುರಿಯಲ್ಲಿ ಕೂಲಿ ಜನರಿಗೆ ಸರಿಯಾಗಿ ಕಾಳು ದೊರೆಯುವುದಿಲ್ಲೆಂದೂ ೪ ಸಾವಿರ ರೂಪಾಯಿ ಅಂಜುಮಾನದಲ್ಲಿ ಕೂಡಿಟ್ಟಿದ್ದರೂ ಇಲ್ಲಿ ಅಂಗಡಿ ಪ್ರಾರಂಭಿಸಿಲ್ಲೆಂದೂ ಕೂಡಲೆ ಅಂಗಡಿ ಪ್ರಾರಂಭಿಸಬೇಕೆಂದೂ ಮುಟಮುರಿ ಕಾಂಗ್ರೆಸ ಸಮಿತಿಯವರು ತಾಲೂಕದಾರರಿಗೆ ಬಿನ್ನವಿಸಿಕೊಂಡಿರುವರು.

ಔಂಧ ರಾಜೇಸಾಹೇಬರ ೨೯ ನೇ ಜನ್ಮದಿನೋತ್ಸವ ನಿಮಿತ್ತ ೩ ನೇ ತಾರೀಕು ಸೇರಿದ ದರಬಾರದಲ್ಲಿ ಇಬ್ಬರು ಹೊಸ ಮಂತ್ರಿಗಳ ಹೆಸರು ಜಾಹೀರ ಮಾಡಿದರು. ಗ್ರಾಮೋದ್ಧಾರದ ಸಲುವಾಗಿ ಗ್ರಾಮಾಂತರ ಪ್ರತಿನಿಧಿಗಳನ್ನು ಬೇಕಾಗಿಯೇ ಮಂತ್ರಿಗಳನ್ನಾಗಿ ಆರಿಸಿದೆ ಎಂದು ಅವರು ತಿಳಿಸಿದರು. ಆರ್ ಎನ್ ದೇಶಮುಖ ಮತ್ತು ಬಿ ಜಿ ಲಾಡ ಇವರೇ ಆ ಹೊಸ ಮಂತ್ರಿಗಳು.

ರಾಜಕೀಯ ಸುಧಾರಣೆಗಳನ್ನು ಬೇಗನೆ ಘೋಷಿಸುವದಾಗಿ ಮಿರಜಿ ( ಕಿರಿಯ ) ರಾಜೇಸಾಹೇಬರು ತಿಳಿಸಿರುವರು. ಇದೇ ೧೧ ನೇ ತಾರೀಕು ಸೇರುವ ಶಾಸನ ಸಭೆಯಲ್ಲಿ ಈ ಘೋಷಣೆ ಜಾಹೀರ ಮಾಡಲಾಗುವದು.

# ಹಿಂದುಸ್ತಾನ

## ಮುಂಬಯಿ

ಮುಂಬಯಿಯ ರಿಝರ್ವ ಬ್ಯಾಂಕಿನಲ್ಲಿ ಸುಳ್ಳು ಹೇಳಿಕೆ ಕೊಟ್ಟು ೩ ಲಕ್ಷ ರೂಪಾಯಿಗಳನ್ನು ತೆಗೆದುಕೊಂಡು ಹೋದ ಸಂಬಂಧದಲ್ಲಿ ೧೨ ಜನರು ಸೆರೆಹಿಡಿಯಲ್ಪಟ್ಟಿರುವರು. ರಮಣಲಾಲ ಮಂಗಳದಾಸ ಶಹಾ ಇವರು ಈ ಸಂಬಂಧದಲ್ಲಿ ಪೋಲೀಸರಿಗೆ ಬೇಕಾಗಿದ್ದರು. ಅವರು ತಾವೇ ಬಂದು ಪೋಲೀಸರಲ್ಲಿ ಹಾಜರಾದರು. ಇದಕ್ಕೆ ಮೂಲ ಕಾರಣದಂತಿದ್ದ ಮಂಗಳದಾಸ ಶಹಾ ಇವರು ಇನ್ನೂ ಕಾಣೆಯಾಗಿರುವರು. ೫೦೦೦ ರೂಪಾಯಿ ಜಾಮೀನ ಮೇಲೆ ಇವರ ಬಿಡುಗಡೆಯಾಗಿದೆ.

ಮುಂಬಯಿ ಪ್ರಾಂತದ ಮೋಟರ ಸಾರಿಗೆಯನ್ನು ಮುಂಬಯಿ ಸರಕಾರದವರು ತಮ್ಮ ವಶಕ್ಕೆ ತೆಗೆದುಕೊಂಡು ಸರಕಾರೀ ಸಾರಿಗೆ ಖಾತೆಯ ಮುಖಾಂತರ ಅವನ್ನ ನಡೆಸಬೇಕೆಂದು ಗೊತ್ತಾಗಿ ಆ ಬಗ್ಗೆ ಒಂದು ಯೋಜನೆಯನ್ನು ತಯಾರಿಸಲಾಗಿದೆಂದು ತಿಳಿಯುತ್ತದೆ.

ಮುಂಬಯಿ ಪ್ರಾಂತಿಕ ಮೋಟರ ಯೂನಿಯನ್ ಕಾಂಗ್ರೆಸ್ಸಿನ ಕಾರ್ಯಕಾರೀ ಸಮಿತಿಯ ಸಭೆ ಪುಣೆಯಲ್ಲಿ ಸೇರಿ ಮೋಟರ ಸಾರಿಗೆಯ ರಾಷ್ಟ್ರೀಕರಣದಿಂದ ಸರಕಾರದ ಹಿತ ಸಾರ್ವಜನಿಕ ಅನುಕೂಲತೆಯ ಯಾವ ದೃಷ್ಟಿಯಿಂದಲೂ ಯೋಗ್ಯವೆಂದೆನಿಸದು. ೧೯೩೯ ನೇ ಇಸ್ವಿಯ ಮೋಟರ ವಾಹನಗಳ ಕಾಯದೆಯಲ್ಲಿ ಹೆಚ್ಚಿನ ಸುಧಾರಣೆ ಮಾಡಲು ಇನ್ನೂ ಐದು ವರುಷ ಅದರ ಪ್ರಯೋಗ ಮಾಡಿ ನೋಡಬೇಕು ಎಂದು ಮುಂತಾಗಿ ಅವರು ವಿನಂತಿ ಮಾಡಿಕೊಂಡಿದ್ದಾರೆ.

ಅಹಮ್ಮದಾಬಾದ ಕೈಮಗ್ಗದವರ ಶಿಷ್ಟ ಮಂಡಲದೊಡನೆ ಚರ್ಚೆ ನಡೆಸಿದಾಗ ಬಟ್ಟೆಯ ಬೆಲೆಯನ್ನು ಗೊತ್ತು ಮಾಡುವದು ಅಪರಿಹಾರ್ಯವೆಂದು ನಾಗರಿಕ ಪೂರೈಕೆ ಮಂತ್ರಿ ಶ್ರೀ ದಿನಕರರಾವ ದೇಸಾಯರು ಹೇಳಿದರು.

ಸೊಲ್ಲಾಪುರ ಜಿಲ್ಲೆಯಲ್ಲಿ ದರೋಡೆ ಹಾವಳಿ ನಡೆದ ಲಕ್ಷಣ ಕಾಣುತ್ತದೆ. ಸಮೀಪದಲ್ಲಿಯೆ ಇರುವ ಹತ್ತರಸಿಂಗ ಹಳ್ಳಿಯಲ್ಲಿ. ಸೈನಿಕ ಉಡುಪು ಧರಿಸಿದ ದರೋಡೆಗಾರರು ದರೋಡೆ ಹಾಕಿದ ಸುದ್ದಿ ಪ್ರಸಿದ್ಧವಾಗುವಷ್ಟರಲ್ಲಿಯೇ ಕರಮಾಳೆ ತಾಲೂಕಿನ ಟೆಂಭೂಣಿ ಹತ್ತರ ಶಿವರೆ, ಸೊಲ್ಲಾಪುರ ತಾಲೂಕಿನ ದೇಗಾಂವ ಮತ್ತು ಬಾರ್ಶಿ ತಾಲೂಕಿನ ದೇಗಾಂವ ಮತ್ತು ಪಾಲಗರಿ ಹತ್ತಿರದ ಬಂದು ಹಳ್ಳಿಯಲ್ಲಿ ಹೀಗೆ ನಾಲ್ಕು ಹಳ್ಳಿಗಳಲ್ಲಿ ಮೂರೇ ದಿನಗಳಲ್ಲಿ ದರೋಡೆ ಹಾಕಲ್ಪಟ್ಟ ಸುದ್ದಿ ಬಂದಿದೆ.

## ಮದ್ರಾಸ

ಮದ್ರಾಸ ಸರಕಾರ ಮೋಟರ ಸಾರಿಗೆಯ ರಾಷ್ಟ್ರೀಕರಣ ಮಾಡುವದನ್ನು ನಿರ್ಧರಿಸಿ ಅದರ ಬಗ್ಗೆ ವಿಚಾರ ಮಾಡಲು ಮಂತ್ರಿಗಳ ಒಂದು ಉಪಸಮಿತಿಯನ್ನು ನೇಮಿಸಿದೆ.

ಸರಕಾರದ ಆದಾಯವನ್ನು ಹೆಚ್ಚಿಸುವುದಕ್ಕಾಗಿ ಮದ್ರಾಸ ಮಂತ್ರಿಮಂಡಲದವರು ಒಕ್ಕಲತನ ಉತ್ಪನ್ನದ ಮೇಲೆ ಕರ ಹೇರಲು ನಿರ್ಧರಿಸಿದ್ದಾರೆ. ೫೦೦೦ ರೂಪಾಯಿಗಳು ಹಾಗು ಅದರ ಕೆಳಗಿನ ಉತ್ಪನ್ನಕ್ಕೆ ಈ ಕರ ಅನ್ವಯಿಸುವದಿಲ್ಲ.

ಪೆಟ್ರೋಲ ಮೇಲಿನ ಮಾರಾಟ ಕರವನ್ನು ಇಮ್ಮಡಿ ಮಾಡಲು ಮದ್ರಾಸ ಸರಕಾರದವರು ನಿರ್ಣಯಿಸಿರುವರೆಂದು ತಿಳಿಯುತ್ತದೆ. ಈ ಕರವು ಒಂದು ಗ್ಯಾಲನ್ನಿಗೆ ಆಣೆ ೧—೬ ಇದೆ.

ಮದ್ರಾಸ ಸರಕಾರದವರು ಪ್ರಾಂತದಲ್ಲೆಲ್ಲ ಕುದುರೆ ಜೂಜನ್ನು ಮುಂದಿನ ವರ್ಷದಿಂದ ರದ್ದುಗೊಳಿಸಲು ನಿರ್ಧರಿಸಿದ್ದಾರೆ. ಈ ವರ್ಷದಲ್ಲಿ ಜೂಜಿನ ಕರವನ್ನು ನೂರಕ್ಕೆ ೧೫ ರಷ್ಟು ಏರಿಸಲಾಗುವದು.

ಮುಂದಿನ ತಿಂಗಳಲ್ಲಿ ನಡೆಯಲಿದ್ದ ಲೋಕಲ್ ಬೋರ್ಡ ಚುನಾವಣೆಗಳನ್ನು ಪ್ರಾಂತದಲ್ಲಿ ಶಾಂತಿ ರಕ್ಷಣೆಯ ದೃಷ್ಟಿಯಿಂದ ಮುಂದರಿಸಲಾಗಿದೆ. ಆದರೆ ಅವುಗಳ ಮುಂದಿನ ತಾರೀಖನ್ನು ನಿಶ್ಚಯಿಸಿಲ್ಲ.

ಮದ್ರಾಸದ ಮುಖಂಡರೂ ಪ್ರಾಗತಿಕ ಸಮ್ಮೇಲನದ ಹಿಂದಿನ ಅಧ್ಯಕ್ಷರೂ ಆದ ಸರ್ ಪಿ. ಎಸ್. ಶಿವಸ್ವಾಮಿ ಅಯ್ಯರರು ೫ ನೇ ತಾರೀಕು ಸಾಯಂಕಾಲ ಮದ್ರಾಸದಲ್ಲಿ ತಮ್ಮ ಮನೆಯಲ್ಲಿ ನಿಧನ ಹೊಂದಿದರು. ಅವರಿಗೀಗ ೮೩ ವರ್ಷಗಳಾಗಿದ್ದುವು.

ಮದ್ರಾಸ ಪ್ರಾಂತದ ಗುಡ್ಡಗಾಡು ಜನರ ಸ್ಥಿತಿಗತಿಗಳನ್ನು ವಿಚಾರಿಸಲು ಸರಕಾರವು ಒಂದು ಸಮಿತಿಯನ್ನೇರ್ಪಡಿಸಿರುವದು.

## ಹೊಸದಿಲ್ಲಿ

ಸತ್ಯಾರ್ಥಪ್ರಕಾಶ ಸಂರಕ್ಷಣ ಸಮಿತಿಯ ಕ್ರಿಯಾ ಸಮಿತಿಯ ಸಭೆ ಸೇರಿ ಸತ್ಯಾರ್ಥಪ್ರಕಾಶದ ಸಿಂಧ ಆವೃತ್ತಿಯನ್ನು ಸಿಂಧ ಸರಕಾರ ಆಕ್ಷಿಪ್ತ ಮಾಡಿದ್ದನ್ನು ನಿಷೇಧಿಸಿ ಅದನ್ನು ಹಿಂತೆಗೆದುಕೊಳ್ಳಹಚ್ಚಲು ಪರಿಣಾಮಕರ ಉಪಾಯ ಕೈಕೊಳ್ಳಬೇಕೆಂದು ನಿರ್ಧರಿಸಲಾಯಿತು.

ವೈಯಕ್ತಿಕ ಸತ್ಯಾಗ್ರಹ ಹೂಡುವದು ಗೊತ್ತಾಗಿ ದೇಶದಲ್ಲಿಯ ಎಲ್ಲ ಆರ್ಯ ಸಮಾಜದವರಿಗೆ ಮುಂದೆ ಬಂದು ಹೆಸರು ಕೊಡಲು ಕೇಳಿಕೊಳ್ಳಲಾಯಿತು. ಮಹಾತ್ಮಾ ನಾರಾಯಣಸ್ವಾಮೀಜಿಯವರು ಸರ್ವಾಧಿಕಾರಿಗಳಾಗಿ ಆರಿಸಲ್ಪಟ್ಟರುವರು.

ಅಕ್ಟೋಬರ ತಿಂಗಳಲ್ಲಿ ಪರದೇಶದಿಂದ ವೃತ್ತಪತ್ರದ ಕಾಗದ ಕಡಮೆ ಬಂದುದರಿಂದ ಪೇಟೆಯಲ್ಲಿ ಅದು ದೊರೆಯದಾಗಿದೆ; ಆದುದರಿಂದ ಅಕ್ಟೋಬರ ತಿಂಗಳದ ಪರಮಿಟ್ಟಿನ ಮೇಲೆ ಕಾಗದವು ಸಿಕ್ಕದೆ ಹೋದರೆ ಅದರ ಮೇಲೆ ನವಂಬರ ತಿಂಗಳದಲ್ಲಿ ಕಾಗದ ಪಡೆಯಬಹುದೆಂದು ಹಿಂದುಸ್ತಾನ ಸರಕಾರ ವಿಧಿಸಿದೆ.

ದಿಲ್ಲಿ ಉರ್ದುಪಾರ್ಕಿನಲ್ಲಿ ಸಭೆ ಮುಗಿಸಿಕೊಂಡು ತಿರುಗಿ ಬರುತಿರುವ ಜನರ ಗುಂಪಿನ ಮೇಲೆ ರವಿವಾರ ರಾತ್ರಿ ಕಾಝೀ ಹೌಸ ಪೋಲೀಸ ಸ್ಟೇಶನ ಬಳಿಯಲ್ಲಿ ಪೋಲೀಸರು ಲಾಠಿ ಹಲ್ಲೆ ಮಾಡಿದ್ದರಿಂದ ೫-೬ ಜನರಿಗೆ ಗಾಯಗಳಾದವು. ೨೧ ಜನ ಸೆರೆಹಿಡಿಯಲ್ಪಟ್ಟಿರುವರು. ೧೪೪ ನೇ ಕಲಮನ್ನು ಉಲ್ಲಂಘಿಸಿದ್ದೇ ಇದಕ್ಕೆ ಕಾರಣ.

ಖಾನಬಹದ್ದೂರ ಶೇಖ ಹಬೀಬುರ್ ರಹಮಾನರು ದಿಲ್ಲಿ ನಗರ ಸಭೆಗೆ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಈ ನಗರ ಸಭೆಗೆ ಲೋಕನಿಯುಕ್ತರು ಅಧ್ಯಕ್ಷರಾದುದು ಇದೇ ಮೊದಲನೆ ಸಲ. ಇದುವರೆಗೆ ದಿಲ್ಲಿಯ ಡೆ. ಕಮೀಶನರರು ಅಧ್ಯಕ್ಷರಾಗಿರುತಿದ್ದರು.

## ಸಿಂಧ

ಸಿಂಧ ಶಾಸನ ಸಭೆಯ ಚುನಾವಣೆಗೆ ಮೀರಪುರಖಾಸ ಸ್ಥಳದಿಂದ ಅಧಿಕೃತ ಲೀಗ ಹುರಿಯಾಳುಗಳಾಗಿ ನಿಂತಿದ್ದ ಗುಲಾಮ ರಸೂಲ ಭುರುಗ್ರಿಯವರು ತಮ್ಮ ವಿರುದ್ಧ ನಿಂತಿದ್ದ ಗುಲಾಮ ಮುಸ್ತಫಾ ಭುರುಗ್ರಿಯವರ ಪರವಾಗಿ ತಮ್ಮ ನಾಮಪತ್ರವನ್ನು ಹಿಂತೆಗೆದುಕೊಂಡಿದ್ದಾರೆ. ಇವರಿಬ್ಬರು ಅಣ್ಣ-ತಮ್ಮಂದಿರು. ಗುಲಾಮ ಮುಸ್ತಫಾ ಇವರು ಸಯ್ಯದ ಪಕ್ಷದವರು.

ಅಖಿಲ ಭಾರತದ ಅರ್ಥಿಕ ಪರಿಷತ್ತಿನ ೨೯ ನೇ ಅಧಿವೇಶನವು ಕರಾಚಿಯಲ್ಲಿ ಅಲಹಾಬಾದ ವಿಶ್ವವಿದ್ಯಾಲಯದ ಪ್ರೊ. ಎಸ್ ಕೆ ರುದ್ರರ ಅಧ್ಯಕ್ಷತೆಯಲ್ಲಿ ಕ್ರಿಸಮಸ್‌ದಲ್ಲಿ ಜರಗುವದು.

ಸಿಂಧ ಚುನಾವಣೆಯಲ್ಲಿ ಸಹಾಯ ಮಾಡಲು ಬ್ಯಾ. ಜಿನ್ನಾರವರು ಅಲ್ಲಿಗೆ ಹೋಗಲಿರುವರು.

ಶಿಕಾರಪುರದ ಸಬ್ ಇನಸ್ಪೆಕ್ಟರ ಮನೆಯನ್ನು ಹೂರ ತಂಡದವರು ಮುತ್ತಿ ಅವರ ಅತ್ತಿಗೆಯನ್ನು ಗುಂಡಿಕ್ಕಿ ಕೊಂದರು. ಈ ಸಬ್ ಇನಸ್ಪೆಕ್ಟರರು ಹೂರ ಸಿ ಅಯ ಡಿಯಲ್ಲಿ ಕೆಲಸ ಮಾಡುತಿರುವರು. ಮಾಗಳ ಎಂಬ ಹಳ್ಳಿಯಲ್ಲಿ ೬ ದರೋಡೆಗಳಾದವು. ಆದರೆ ಹಳ್ಳಿಗರು ಅವರನ್ನು ಅಟ್ಟಿದರು.

## ಸಂಯುಕ್ತಪ್ರಾಂತ

ಪಂಡಿತ ಮದನಮೋಹನ ಮಾಲವಿಯಾ ಇವರಿಗೆ ೪ ನೇ ತಾರೀಖಿನಿಂದ ಜ್ವರ ಬರುತಿದ್ದು ೫ ನೇ ತಾರೀಕು ಸಾಯಂಕಾಲ ೧೦೨ ಡಿಗ್ರಿ ಜ್ವರ ಇದ್ದವು. ನೌಖಾಲಿ ದುರಂತದ ಸುದ್ದಿ ಕೇಳಿದಂದಿನಿಂದ ಅವರ ಪ್ರಕೃತಿ ಚಿಂತಾತುರವಾಗಿದೆ.

ಲಖನೌ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ಸಿನೆಮಾಗಳಿಗೆ ತಮಗೆ ಅರ್ಧ ದರದಿಂದ ತಿಕೀಟು ದೊರೆಯಬೇಕೆಂದು ನಿರೋಧನ ಹೂಡಿದ್ದರಿಂದ ಈ ವಿದ್ಯಾರ್ಥಿಗಳಲ್ಲಿ ಪುನಃ ಶಿಸ್ತು ಸ್ಥಾಪಿತವಾಗುವ ವರೆಗೆ ವಿಶ್ವವಿದ್ಯಾಲಯವನ್ನು ಮುಚ್ಚಿಬಿಡಬೇಕೆಂದು ಯುಕ್ತಪ್ರಾಂತ ಸರಕಾರ ಆಜ್ಞೆ ಹೊರಡಿಸಿದೆ. ಸಿವಿಲ್ ಸೆಕ್ರೆಟರಿಯೆಟದೆದುರಿಗೆ ೧ ನೇ ತಾರೀಕು ಮತ ಪ್ರದರ್ಶನ ಮಾಡಿದರೆಂದು ೨೪೩ ವಿದ್ಯಾರ್ಥಿಗಳನ್ನು ಸೆರೆಹಿಡಿಯಲಾಗಿದೆ. ಜೇಲ ಖಾತೆಯ ಮಂತ್ರಿಗಳ ಸಲಹೆ ಮೇರೆಗೆ ಇವರಿಗೆ ಬ ವರ್ಗ ಕೊಡಲಾಗಿದೆ.

ಬನಾರಸ ಹಿಂದೂ ವಿಶ್ವವಿದ್ಯಾಲಯದವರು ಪಂಡಿತ ಜವಾಹರಲಾಲರಿಗೆ ಡಾಕ್ಟರ ಅಫ್ ಸಾಯನ್ಸ ಎಂಬ ಗೌರವ ಪದವಿಯನ್ನು ಇದೇ ೧೫ ಡಿಸೆಂಬರಕ್ಕೆ ಅರ್ಪಿಸಲಿರುವರು. ಡಾ. ರಾಜೇಂದ್ರ ಪ್ರಸಾದರು ಇದರ ಅಧ್ಯಕ್ಷತೆಯನ್ನು ವಹಿಸುವರು. ಚೀನದ ಡಾ. ಕೊತಾಯಿ ಚಾಯಿಯವರು ಇದೇ ಸಮಾರಂಭದಲ್ಲಿ ತಮ್ಮ ಡಾಕ್ಟರ ಅಫ್ ಲಿಟರೇಚರ ಎಂಬ ಪದವಿಯನ್ನು ಸ್ವೀಕರಿಸಲಿರುವರು.

(೫ ನೇ ಪುಟದಿಂದ)

ಹಿಟ್ಲರನು ದುರ್ಬಲ ರಾಷ್ಟ್ರಗಳನ್ನು ನಿರ್ಬಂಧಿಸಿದಂತೆ ಈ ಜನರು ನಿರ್ಬಂಧದಲ್ಲಿರುವರು. ಡಚ್ ಈಸ್ಟ ಇಂಡೀಜದ ಜನರು ದಾಸ್ಯವನ್ನು ಕಿತ್ತಿಹಾಕಿ ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವರು. ಆದರೂ ಆ ದೇಶವಿನ್ನೂ ಬ್ರಿಟಿಶ್ ವೈಸರಾಯರು ಮತ್ತು ಬ್ರಿಟಿಶ್ ಅಧಿಕಾರಿಗಳಿಂದ ಆಳಲ್ಪಡುತ್ತಿದೆ. ರಾಜಕೀಯ ಮತ್ತು ಆರ್ಥಿಕ ಬಂಧನಗಳಿಂದ ಬದ್ಧವಾದ ಇರಾಕ ಇಜಿಪ್ತದಂಥ ರಾಷ್ಟ್ರಗಳ ಸ್ವಾತಂತ್ರ್ಯದ ಬಗ್ಗೆ ಬ್ರಿಟಿಶ್ ಸಾಮ್ರಾಜ್ಯವಾದಿಗಳಿಗೆ ಆಸ್ಥೆಯೇ ಇಲ್ಲ, ಮನ್ನಣೆಯಿಲ್ಲ. ಇರಾಣದ ಎಣ್ಣೆಯ ಮೇಲೆ ಮತ್ತು ಇಜಿಪ್ತದ ಉದ್ಯೋಗ ಧಂದೆಗಳ ಮೇಲೆಯೇ ಬ್ರಿಟಿಶರ ವಕ್ರದೃಷ್ಟಿ ಎಂದೂ ಅದು ಅಭಿಪ್ರಾಯಪಟ್ಟಿದೆ. ಸಾಮ್ರಾಜ್ಯತ್ವದ ಹಂಬಲವನ್ನು ತಳೆದ ರಾಷ್ಟ್ರಗಳು, ದುರ್ಬಲ ರಾಷ್ಟ್ರಗಳ ಸ್ವಾತಂತ್ರ್ಯವನ್ನು ಎಂತು ಹತ್ತಿಕ್ಕುತ್ತಿರುವವೆಂಬುದು ಇದರಿಂದ ಸ್ಪಷ್ಟವಾಗುವದು.

## ಬಂಗಾಲ

ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ ಮುಖಂಡರು ಕಲಕತ್ತೆಗೆ ಬಂದುದರ ಪ್ರಯೋಜನ ಪಡೆದು ಬಂಗಾಲದಲ್ಲಿ ಸಮ್ಮಿಶ್ರ ಮಂತ್ರಿಮಂಡಳ ರಚಿಸುವ ಪ್ರಯತ್ನವನ್ನು ಫಜಲುಲ್ ಹಕ್ಕರು ಮಾಡುತಿರುವರೆಂದು ಸುದ್ದಿ.







# ಕೇಂದ್ರ ಶಾಸನ ಸಭೆ

## ಗುಪ್ತ ಪೋಲೀಸರ ಕಾರಸ್ಥಾನ

ಕೆಲವು ರಾಷ್ಟ್ರೀಯ ಮುಖಂಡರಿಗೆ ಸಂಬಂಧಿಸಿದ ಕಾಗದಪತ್ರಗಳನ್ನು ಸಿ ಅಯ ಡಿ ಖಾತೆಯವರು ಸದ್ಯದ ಕೇಂದ್ರ ಸರಕಾರ ಅಧಿಕಾರಕ್ಕೆ ಬರುವ ಮೊದಲು ಸುಟ್ಟು ಬಿಟ್ಟರು. ಎಂದು ಗೃಹಮಂತ್ರಿ ಸರದಾರ ವಲ್ಲಭಭಾಯರ ಪರವಾಗಿ ಚಕ್ರವರ್ತಿ ರಾಜಗೋಪಾಲಾಚಾರ್ಯರು ೪ ನೇ ತಾರೀಕು ಹೇಳಿದರು. ಇನ್ನು ಈ ಕಾಗದಪತ್ರ ಅವಶ್ಯವಿಲ್ಲೆಂದು ಅವರು ಸುಟ್ಟರು. ಯಾವ ಕಾಗದಪತ್ರಗಳನ್ನೂ ಬಚ್ಚಿಟ್ಟಿರುವದಿಲ್ಲ. ಸೆಕ್ರೆಟರಿಯೆಟನಲ್ಲಿರುವ ಯಾವ ಕಾಗದಪತ್ರಗಳನ್ನೂ ನಾಶಮಾಡಿಲ್ಲ. ಈ ವಿಷಯದ ಬಗ್ಗೆ ಸರಕಾರದವರು ವಿಚಾರಣೆ ಮಾಡಿಲ್ಲ. ಕ್ರಮ ತೆಗೆದುಕೊಳ್ಳುವದು ಅವಶ್ಯವಿಲ್ಲೆಂದು ಹೇಳಿದರು. ಉಳಿದ ಪಕ್ಷಗಳ ಮುಖಂಡರಿಗೆ ಸಂಬಂಧಿಸಿದ ಕಾಗದಪತ್ರ ಸುಡಲ್ಪಟ್ಟವೊ ಎಂಬ ಪ್ರಶ್ನೆಗೆ ಉತ್ತರ ಕೊಟ್ಟರೆ ಗುಪ್ತ ಸಂಗತಿಗಳನ್ನು ಹೊರಗೆಡುಹಿದಂತಾಗುವದೆಂದು ಹೇಳಿದರು. (ನಗು) ಹಳೆಯ ಫಾಯಿಲುಗಳ ಬದಲು, ಹೊಸ ಫಾಯಿಲುಗಳನ್ನು ಸುರು ಮಾಡಿದೆಯೊ ಎಂದು ಕೇಳಿದ್ದಕ್ಕೆ ಈ ಪ್ರಶ್ನೆಗೆ ಉತ್ತರ ಕೊಟ್ಟರೆ ಗುಪ್ತ ಸಂಗತಿಗಳನ್ನು ಹೊರಗೆಡುಹಬೇಕಾಗುತ್ತದೆ ಎಂದು ರಾಜಾಜಿಯವರು ಹೇಳಿದರು. (ಪುನಃ ನಗು) 'ನಾಶ ಮಾಡಿದ ಕಾಗದಪತ್ರಗಳಷ್ಟೇ ಅನವಶ್ಯವಿದ್ದವೆಂದು ಹೇಗೆ ಹೇಳುವಿರಿ. ಎಂದು ಕೇಳಿದ್ದಕ್ಕೆ ಅಷ್ಟೇ ಉತ್ತರ ಕೊಡಲು ನನಗೆ ಅಪ್ಪಣೆಯಾಗಿದೆಂದು ಹೇಳಿದರು. ಗುಪ್ತ ಪೋಲೀಸ ಖಾತೆಯಿಲ್ಲದೆ ಯಾವ ಸರಕಾರವೂ ಕೆಲಸ ಮಾಡಲಾರದು. ಗುಪ್ತ ಪೋಲೀಸರ ಸುದ್ದಿಯ ಮೂಲಗಳನ್ನು ನಾವು ಗುಪ್ತವಾಗಿಡದಿದ್ದರೆ ಅವರಿಂದ ನಿಷ್ಠೆಯ ಸೇವೆಯನ್ನು ಬಯಸುವದು ಸಾಧ್ಯವಿಲ್ಲ. ಮಂತ್ರಿಗಳು ಬದಲಾದ ಕೂಡಲೆ ಅಧಿಕಾರಿಗಳನ್ನು ಅಪಹಾಸ್ಯಕ್ಕೆ ಗುರಿಪಡಿಸುವದು ಅಪೇಕ್ಷಣೀಯವಾಗಲಾರದು. ಆದುದರಿಂದ ಪ್ರಜಾಸತ್ತೆಯ ಪರಂಪರೆಗನುಸಾರವಾಗಿ ಕೆಲ ಸಂಗತಿಗಳನ್ನು ಗುಪ್ತವಿಡಬೇಕಾಗುವದು. ವಿರೋಧಿ ಪಕ್ಷದವರು ಅಧಿಕಾರಸ್ಥಾನಕ್ಕೆ ಬಂದರೆ ಮತ್ತು ಅಧಿಕಾರದಲ್ಲಿದ್ದವರು ಹೊರಗೆ ಬಂದರೆ ಕೈಕೆಳಗಿನ ಅಧಿಕಾರಿಗಳ ಹುರುಳನ್ನು ಹೊರಗೆಡುಹಿ ಅಪಹಾಸ್ಯಕ್ಕೀಡು ಮಾಡುವದು ಸರಿಯಲ್ಲೆಂದು ರಾಜಾಜಿಯವರು ಹೇಳಿದರು.

ಇಂಡೋನೇಶಿಯಾದಲ್ಲಿಯ ಹಿಂದೀ ಸೈನ್ಯವನ್ನು ಇದೇ ನವಂಬರ ತಿಂಗಳ ಅಂತ್ಯದೊಳಗಾಗಿ ಹಿಂದಕ್ಕೆ ಕರೆಯಿಸಿಕೊಳ್ಳಲಾಗುವದೆಂದು ಸಂರಕ್ಷಣ ಖಾತೆಯ ಕಾರ್ಯದರ್ಶಿಗಳು ಹೇಳಿದರು.

ಈ ಸಲ ಅಂದಾಜ ಪತ್ರಿಕೆಯ ಅಧಿವೇಶನ ಪ್ರಾರಂಭವಾಗುವ ಮೊದಲು ಸ್ಟರ್ಲಿಂಗದ ಸಂಗ್ರಹದ ಬಗ್ಗೆ ಬ್ರಿಟಿಶ್ ಸರಕಾರದೊಡನೆ ಮಾತುಕತೆ ನಡೆಸಲಾಗುವದು. ದಿಲ್ಲಿಯಲ್ಲಿಯೇ ಈ ಮಾತುಕತೆ ನಡೆಸಬೇಕೆಂದು ಸೂಚಿಸಿದ್ದಕ್ಕೆ ವಿಚಾರ ಮಾಡಲಾಗುವದೆಂದು ಉತ್ತರಿಸಿದರು. ಆಜದ ಸೈನಿಕರಲ್ಲಿ ಇನ್ನೂ ೧೫ಜನ ತುರಂಗಗಳಲ್ಲಿರುವರೆಂದು ಮತ್ತೊಂದು ಪ್ರಶ್ನೆಗೆ ಉತ್ತರ ಕೊಡಲಾಯಿತು.

ಹಿಂದುಸ್ತಾನದಲ್ಲಿ ಇನ್ನು ಮೇಲೆ ಇಡಬೇಕೆಂದಿರುವ ಸೈನ್ಯಕ್ಕೂ ಈಗಿದ್ದ ಸೈನ್ಯಕ್ಕೂ ಅಂತರ ೬೦೦೦ ಇರುತ್ತದೆ. ಶಾಂತಿ ಕಾಲದಲ್ಲಿ ಇಂತಿಷ್ಟು ಸೈನ್ಯವಿರಬೇಕೆಂಬ ಈಗ ಕೈಕೊಂಡಿರುವ ನಿರ್ಣಯ ತಾತ್ಪೂರ್ತಿಕವಿದೆ. ಸರಕಾರ ಅದಕ್ಕೆ ಇನ್ನೂ ಒಪ್ಪಿಗೆ ಕೊಟ್ಟಿಲ್ಲ. ಸೈನ್ಯ ೩೨೪೬೭ ಅಧಿಕಾರಿಗಳು, ೧೦೨೩೪೪೪ ಸೈನಿಕರು, ವಿಮಾನ ಪಡೆ ೧೪೭೭ ಅಧಿಕಾರಿಗಳು ಮತ್ತು ೩೪೪೭೫ ವೈಮಾನಿಕರು ನೌಕಾಪಡೆ ಅಧಿಕಾರಿಗಳು ಇತರರ ಸೇರಿ ೧೧೧೯ ಇರುವರೆಂದು ಹೇಳಲಾಯಿತು.

ಉಪ್ಪಿನ ಕರದ ಸಂಬಂಧದಲ್ಲಿ ಅರ್ಥ ಸಚಿವರು ಬೇಗನೆ ಒಂದು ಹೇಳಿಕೆ ಕೊಡಲಿದ್ದಾರೆಂದು ಶ್ರೀ ಪ್ರಕಾಶರಿಗೆ ಉತ್ತರ ಕೊಡಲಾಯಿತು.

## ಆಹಾರ ಪರಿಸ್ಥಿತಿ

ಕೇಂದ್ರ ಶಾಸನಸಭೆಯಲ್ಲಿ ಆಹಾರ ಮಂತ್ರಿಗಳಾದ ಡಾ. ರಾಜೇಂದ್ರ ಪ್ರಸಾದರು ೪ ನೇ ತಾರೀಕು ಹಿಂದುಸ್ತಾನದ ಆಹಾರ ಪರಿಸ್ಥಿತಿಯನ್ನು ಕುರಿತು ಚರ್ಚೆಯನ್ನು ಪ್ರಾರಂಭಿಸಿದರು. ೧೯೪೬ ಫೆಬ್ರುಅರಿಯಿಂದ ಹಿಂದುಸ್ತಾನದ ಆಹಾರ ಪರಿಸ್ಥಿತಿ ಸ್ವಲ್ಪೂ ಸುಧಾರಿಸಿಲ್ಲೆಂದೂ ಅದರೆ ಮಳೆ ಮಾತ್ರ ಈ ಸಲ ಒಟ್ಟಾರೆ ಚೆನ್ನಾಗಿ ಆಗಿರುವುದೆಂದೂ ಹೇಳಿದರು. ಈ ಪರಿಸ್ಥಿತಿಯನ್ನು ಸುಧಾರಿಸುವುದಕ್ಕಾಗಿ ಆಯಾತ ಗುತ್ತಿಗೆ ವಸೂಲಿ ಮತ್ತು ನಿಯಂತ್ರಿತ ವಿತರಣೆ ಕೊನೆಯದಾಗಿ ಹುಟ್ಟುವಳಿ ಹೆಚ್ಚಿಸುವದು ಮೊದಲಾದ ಉಪಾಯಗಳನ್ನು ಕೈಕೊಳ್ಳಲಾಗಿದೆಂದೂ ಅವರು ತಿಳಿಸಿದರು.

ಪರರಾಷ್ಟ್ರಗಳಿಂದ ೪೦ ಲಕ್ಷ ಟನ್ ಆಹಾರ ಪದಾರ್ಥಗಳನ್ನು ಬೇಡಿದ್ದರೆ ನಮಗೆ ಕೇವಲ ೧೭ ಲಕ್ಷ ಟನ್ ಬಂದಿದೆ. ಪ್ರತಿಯೊಂದು ಪ್ರಾಂತದಲ್ಲಿಯ ಹೆಚ್ಚಿನ ಧಾನ್ಯವನ್ನು ಸರಕಾರ ವಶಪಡಿಸಿಕೊಳ್ಳುವದು— ಹೊರಗಿನಿಂದ ೧೭ ಲಕ್ಷ ಟನ್ ಬಂದಿದ್ದರೆ ನಮ್ಮ ದೇಶದಲ್ಲಿ ೩೦ ಲಕ್ಷ ಟನ್ ಸಿಕ್ಕಿದೆ. ದೇಶದಲ್ಲಿ ಒಟ್ಟು ಧಾನ್ಯದ ಹುಟ್ಟುವಳಿ ೬೦೦ ಲಕ್ಷ ಟನ್ ಇದ್ದು ರೈತರಿಗೆ ಸಾಕಾಗಿ ೨೪೦ ಲಕ್ಷ ಟನ್‌ದಷ್ಟು ಉಳಿಯುವುದಾಗಿ ಅಂದಾಜು. ೧೯೪೩ ಮಾರ್ಚದಲ್ಲಿ ಒಟ್ಟು ೨೦ ಲಕ್ಷ ಜನರಿಗೆ ಸೀದಾ ಅನ್ವಯಿಸಲಾಗಿತ್ತು. ೧೯೪೬ ರಲ್ಲಿ ಈ ಸಂಖ್ಯೆ ೧೫೦೦ ಲಕ್ಷಕ್ಕೆ ಹೋಗಿದೆ. ಯಾವಾಗಲೂ ನಾವು ೬ ವಾರಗಳ ಧಾನ್ಯ ಸಂಗ್ರಹಿಸುತ್ತ ಬಂದಿದ್ದೆವು. ನವಂಬರ ತಿಂಗಳ ಬಗ್ಗೆ ನಮ್ಮಲ್ಲಿ ಸಾಕಷ್ಟು ಸಂಗ್ರಹವಿಲ್ಲ. ಈಗ ಸಂಗ್ರಹದಲ್ಲಿದ್ದದ್ದು ೪ ವಾರ ಇಲ್ಲವೆ ಅದಕ್ಕೂ ಕಡಮೆ. ಅವಧಿಯದಿರುವದು. ಆದರೆ ಈ ವರ್ಷ ಬೆಳೆ ಚೆನ್ನಾಗಿರುವದರಿಂದ ನಮ್ಮ ಜನರು ಉಪವಾಸ ಸಾಯುವದಿಲ್ಲೆಂದು ನಾನು ಧೈರ್ಯದಿಂದ ಹೇಳಬಲ್ಲೆ. ಉಳಿಕೆ ಪ್ರಾಂತಗಳೂ ಔದಾರ್ಯ ತೋರಿಸಿ ಧಾನ್ಯಗಳನ್ನು ಕೊಟ್ಟರುವವು. ಪರರಾಷ್ಟ್ರಗಳಿಂದ ನಮಗೆ ಇನ್ನೂ ಗೋದಿ ಬೇಕು. ನಾನು ಒಕ್ಕಲತನ ಮತ್ತು ಆಹಾರ ಮಂತ್ರಿ ಇದ್ದುದರಿಂದ ಒಕ್ಕಲತನದ ಹುಟ್ಟುವಳಿಗೆ ಹೆಚ್ಚು ಧಾರಣೆ ಬರಬೇಕು ಮತ್ತು ಅಗ್ಗದರದಿಂದ ಜನತೆಗೆ ಆಹಾರ ಪದಾರ್ಥ ದೊರೆಯಬೇಕು ಇವೆರಡನ್ನೂ ನೋಡಿಕೊಳ್ಳಬೇಕಾಗಿದೆ. ಕರ್ತವ್ಯಬುದ್ಧಿಯಿಂದಲೆ ನಾನು ಸದ್ಯಕ್ಕೆ ಆಹಾರ ಪದಾರ್ಥಗಳ ಧಾರಣೆ ಏರಿಸಬಾರದೆಂದು ನಿರ್ಧರಿಸಿದ್ದೇನೆ. ಎಂದು ಮುಂತಾಗಿ ಹೇಳಿದರು.

ಅನಂತರ ಲಾಸನ್, ಮಸಾನಿ ಅವರು ಭಾಷಣ ಮಾಡಿ ಕಾಳು ಸಂಗ್ರಹದಲ್ಲಿ ಹಾಳಾಗಿ ಹೋಗುತಿರುವದರ ಕಡೆಗೆ ಲಕ್ಷ ಕೊಡಬೇಕೆಂದೂ ಸದ್ಯದ ಸೀದಾ ಸಾಕಷ್ಟಿಲ್ಲದ್ದರಿಂದ ಮಾಂಸ ಹಾಲು ತತ್ತಿ ಮೀನ ಮೊದಲಾದವುಗಳನ್ನು ಕೊಳ್ಳಲು ಶಕ್ತರಿದ್ದವರಿಗೆ ಕಾಳು ಕೊಡಬಾರದೆಂದೂ ಸೂಚಿಸಿದರು.

೬ ನೇ ತಾರೀಕು ಮತ್ತೆ ಚರ್ಚೆ ಮುಂದೆ ಸಾಗಿತು. ಮುಸ್ಲಿಂ ಲೀಗಿನ ಝಿಯಾಉದ್ದೀನರು ಮಾತಾಡುತ್ತ ಹುಟ್ಟುವಳಿದಾರರಿಗೆ ಇಂದು ೩॥ ಪಟ್ಟು ಹಣವು ಸಿಕ್ಕುತಿದ್ದರೂ ಇದು ಕೃತ್ರಿಮವಾಗಿದೆಂದು ಹೇಳಿ ನಿಜವಾದ ಸಂಪತ್ತು ಬೇಕಾದರೆ ಕಷ್ಟಪಟ್ಟು ದುಡಿಯಬೇಕೆಂದರು. ಗ್ರಾಮೋದ್ಯೋಗಗಳಿಗೆ ಸರಕಾರದವರು ಸಹಾಯ ಮಾಡಬೇಕೆಂದು ಹೇಳಿ ರಾಜೇಂದ್ರಪ್ರಸಾದರ ಆಹಾರಪರಿಶೀಲನೆ ಕುರಿತು ಅಭಿನಂದನೆಗಳನ್ನು ಅರ್ಪಿಸಿದರು. ಅರ್ಜಂಟಿನಾದಿಂದ ಮರಳಿಬಂದ ದಿವಾಣ ಚಮಣಲಾಲರು ಇನ್ನು ನಾಲ್ಕೈದು ವರ್ಷ ಆಹಾರ ಪರಿಸ್ಥಿತಿ ಸುಧಾರಿಸುವದಿಲ್ಲೆಂದು ಹೇಳಿದರು. ಇದಕ್ಕಾಗಿ ದೀರ್ಘಾವಧಿ ಯೋಜನೆ ಸ್ವೀಕರಿಸಬೇಕೆಂದು ಸೂಚಿಸಿದರು. ಅಮೇರಿಕೆಯಿಂದ ನಾವೀಗ ೨೫ ಲಕ್ಷ ಟನ ಬೇಡಿದ್ದು ನಮಗೆ ೧೯ ಲಕ್ಷ ಟನ್ ಸಿಗುವದು ಜಾನೇವರಿ ಕೊನೆಯೊಳಗಾಗಿ ನಮಗೆ ೧೦ ಲಕ್ಷ ಟನ ಬರದೇ ಹೋದರೆ ನಮ್ಮ ಪರಿಸ್ಥಿತಿ ಬಿಕ್ಕಟ್ಟಿನದಾಗುವದು. ಅರ್ಜೆಂಟಿನಾ ೨॥ ಲಕ್ಷ ಟನ ಗೋದಿಗೋವಿನಜೋಳ ಮೊದಲಾದದ್ದನ್ನು ಕೊಡಮಾಡಿದ್ದು ಸರಕಾರದವರು ಅದನ್ನು ಸ್ವೀಕರಿಸಬೇಕೆಂದು ಹೇಳಿದರು.

ಆಮೇಲೆ ಅಹಮ್ಮದ ಜಾಫರರು ಮಾತಾಡಿ ಆಹಾರ ಮಂತ್ರಿಗಳು ಆಹಾರ ಪರಿಸ್ಥಿತಿಯನ್ನು ಚೆನ್ನಾಗಿ ಎದುರಿಸಿದ್ದಕ್ಕಾಗಿ ಧನ್ಯವಾದಗಳನ್ನರ್ಪಿಸಿದರು. ಮುಂಬಯಿ ಪ್ರಾಂತಕ್ಕೆ ಇನ್ನೂ ೨ ಲಕ್ಷ ಟನ್ ಆಹಾರ ಪದಾರ್ಥ ಬೇಕಿದ್ದು ಕೇಂದ್ರ ಸರಕಾರದವರು ಅದನ್ನು ಒದಗಿಸಿಕೊಡಬೇಕೆಂದು ಮುಂತಾಗಿ ಹೇಳಿದರು.

### ರೈತರನ್ನು ಗಮನಿಸಿರಿ

ದುಡಿಯಲು ಬೇಕಾದಷ್ಟು ಜನರಿದ್ದು ನೈಸರ್ಗಿಕ ಸಂಪತ್ತು ವಿಪುಲವಾಗಿ ಹವಾಮಾನವು ಅತ್ಯುತ್ತಮವಾಗಿದ್ದು ಫಲವತ್ತಾದ ಈ ನಾಡಿನಲ್ಲಿ ನಾವು ಉಪವಾಸಕ್ಕೀಡಾಗಿರುವದರಿಂದ ಗೊಬ್ಬರ ಟ್ರ್ಯಾಕ್ಟರುಗಳ ಸೌಕರ್ಯಗಳನ್ನು ಒದಗಿಸುವಲ್ಲಿ ನಮಗೆ ಪ್ರಾಶಸ್ತ್ಯ ದೊರೆಯಬೇಕು ಎಂದು ಕೋಪನಹೇಗನದಲ್ಲಿ ಸೇರಿದ್ದ ಜಾಗತಿಕ ಆಹಾರ ಪರಿಷತ್ತಿನಲ್ಲಿ ಎಲ್ಲ ರಾಷ್ಟ್ರಗಳೆದುರು ಹೇಳಬೇಕಾದಾಗ ನನಗೆ ಉಂಟಾದ ನಾಚಿಕೆಯನ್ನು ನಾನೆಂದಿಗೂ ಮರೆಯಲಾರೆನು ಎಂದು ಆ ಪರಿಷತ್ತಿಗೆ ಭಾರತದ ಪ್ರತಿನಿಧಿಯಾಗಿ ಹೋಗಿದ್ದ ಖಾನ ಅಬ್ದುಲ ಘನಿಖಾನರು ಆಹಾರ ಚರ್ಚೆಯಲ್ಲಿ ಮಾತಾಡುತ್ತ ಹೇಳಿದರು. ಕೇವಲ ಉತ್ತಮ ಯೋಜನೆಗಳನ್ನು ರಚಿಸಿದಾಕ್ಷಣ ಧಾನ್ಯದ ಒಂದು ಕಾಳೂ ಬೆಳೆಯಲಾರದು. ಕಚೇರಿಯ ಕಾಗದಪತ್ರದಲ್ಲಿ ಧಾನ್ಯ ಬೆಳೆಯದು. ಬಡ ಅಜ್ಞಾನಿ ರೈತರನ್ನು ಗಮನಿಸಿರಿ ಎಂದು ಸೂಚಿಸಿದರು.

ಶ್ರೀ ಸಿದ್ಧಿಕಿಯವರು ಭಾರತೀಯರಿಗೆ ಧಾನ್ಯ ಪೂರೈಸುವ ಹೊಣೆಯನ್ನು ಅನನುಭವಿಕ ಅಧಿಕಾರಿಗಳಿಂದ ಕಿತ್ತುಕೊಂಡು ವ್ಯಾಪಾರಿಗಳಿಗೆ ಒಪ್ಪಿಸಬೇಕೆಂದರು. ಭಟ್ಟಾಚಾರ್ಯರು ಮತ್ತು ಬ್ಯಾನರ್ಜಿ, ರೋಹಿಣಿಕುಮಾರ ಚೌಧರಿಯವರು ಕೇಂದ್ರ ಸರಕಾರವು ಉಧ್ವಸ್ತ ಬಂಗಾಲ ಆಸಾಮುಗಳನ್ನು ಗಮನಿಸಲಿ ಎಂದು ಕೇಳಿಕೊಂಡರು. ರಾಮಲಿಂಗ ಚೆಟ್ಟಿಯಾರ, ವೆಂಕಟಸುಬ್ಬರೆಡ್ಡಿಯವರು ಮಾತಾಡಿದರು.

ಒಕ್ಕಲತನ ಖಾತೆಯ ಕಾರ್ಯದರ್ಶಿ ಸರ್ ಫಿರೋಜ ಖಾರೆಘಾಟರು ತಮ್ಮ ಖಾತೆಗೆ ಸಂಬಂಧಿಸಿದ ಆಕ್ಷೇಪಗಳ ಬಗ್ಗೆ ಉತ್ತರಿಸುತ್ತ ಧಾನ್ಯದ ಆಯಾತವನ್ನು ನೆಚ್ಚುವದಕ್ಕಿಂತ ಉತ್ಪಾದನೆ ಹೆಚ್ಚಿಸಬೇಕು. ಈ ವರ್ಷ ಧಾನ್ಯದ ಆಯಾತಕ್ಕಾಗಿ ೯೧ ಕೋಟಿ ರೂ. ಗಳನ್ನೂ ಹಂಚಿಕೆಗಾಗಿ ೧೫ ಕೋಟಿ ರೂ. ಗಳನ್ನೂ ವೆಚ್ಚ ಮಾಡಿದ್ದು ರೈತರ ಅಭಿವೃದ್ಧಿಗಾಗಿ ೫—೬ ಕೋಟಿ ರೂ. ಗಳನ್ನು ವೆಚ್ಚ ಮಾಡಲಾಗಿದೆ. ಆದರೆ ಈ ಅಪಾರ ಹಣವನ್ನೇ ರೈತರ ಹಿತಕ್ಕಾಗಿ, ಅವರು ಬೆಳೆಯುವ ಧಾನ್ಯವನ್ನು ಯೋಗ್ಯ ಬೆಲೆಗೆ ಕೊಳ್ಳುವೆವೆಂಬ ಆಶ್ವಾಸನ ಕೊಡುವಲ್ಲಿ ವಿನಿಯೋಗಿಸಿದ್ದರೆ ಒಳ್ಳೆಯದಾಗುತ್ತಿತ್ತು ಎಂದರು.

### ಸೇನರ ಉತ್ತರ

ಆಹಾರ ಖಾತೆಯ ಕಾರ್ಯದರ್ಶಿ ಶ್ರೀ ಸೇನರು ಉತ್ತರಿಸುತ್ತ ಉಗ್ರಾಣದಲ್ಲಿ ಎಷ್ಟು ಧಾನ್ಯ ಹಾಳಾಗಿ ಹೋಗುತ್ತದೆಂಬುದನ್ನು ಅತಿ ಸುಧಾರಿತ ಬ್ರಿಟನ ಅಮೇರಿಕೆಗಳಲ್ಲಿಯೂ ಕಂಡು ಹಿಡಿಯಲು ಸಾಧ್ಯವಿಲ್ಲ ಅಂದ ಮೇಲೆ ಇಲ್ಲಿ ಹೇಗೆ ಸಾಧ್ಯವಾದೀತು. ಭಾರತದ ಆರು ಕೋಟಿ ಟನ್ ಧಾನ್ಯದಲ್ಲಿ ರೈತರಿಂದ ಬರುವ ೪ ಕೋಟಿ ಟನ್ ಧಾನ್ಯವು ಸುಶಿಕ್ಷಿತರುತ್ತದೆ. ಅವರಿಗೆ ಧಾನ್ಯ ಸಂಗ್ರಹದ ರೀತಿ ಗೊತ್ತಿಲ್ಲ. ಅಧಿಕಾರಿಗಳಿಗೆ ಈ ಶಿಕ್ಷಣ ಕೊಡಲಾಗುತ್ತಿದೆ. ಈ ಎರಡು ತಿಂಗಳಲ್ಲಿ ನಮಗೆ ೫೧೫೦೦೦ ಟನ್ ಧಾನ್ಯದ ಕೊರತೆ ಇದೆ. ಪಂಜಾಬವು ೬೦೦೦೦ ಟನ್ ಅಕ್ಕಿ ಕೊಡಬೇಕೆಂದು ಆಹಾರ ಮಂತ್ರಿಗಳು ಹೇಳಿದ್ದಾರೆ. ಅಮೇರಿಕೆಯಿಂದ ೧೧೫೦೦೦ ಟನ್ ಧಾನ್ಯ ಬರುವ ನಿರೀಕ್ಷೆ ಇದೆ. ಇಲ್ಲಿಯ ಜನರ ಶಿಸ್ತು, ಆಹಾರ ಖಾತೆಯ ಒಳ್ಳೆಯ ಆಡಳಿತೆಯ ಮೂಲಕ ನಾವೀ ಬರಗಾಲವನ್ನು ದಾಟಿದ್ದೇವೆಂದರು.

ಬಳಿಕ ಆಂಗ್ಲ ಪಕ್ಷದ ಅಹಾರ ಧಾನ್ಯ ಕೆಡದಂತೆ ನೋಡಿಕೊಳ್ಳುವತ್ತ ಸರಕಾರದ ಗಮನ ಸೆಳೆಯುವ ಉಪಸೂಚನೆಯ ಸ್ವೀಕಾರದ ನಂತರ ಅಹಾರ ಚರ್ಚೆ ಕೊನೆಗಂಡಿತು.

(೪ನೇ ಪುಟದಿಂದ)

ಯಾಯಿಗಳೂ ನಡುಗಾಲ ಸರಕಾರದ ಮಂತ್ರಿಗಳೂ ಆದ ಒಬ್ಬರು ಹೇಳಿದ್ದಾರೆ—ತಾವು ತಪ್ಪುದಾರಿ ಹಿಡಿದು ಒತ್ತಟ್ಟಿಗೆ ಪ್ರಾರಂಭಿಸಿದ ಈ ಹತ್ಯಾಕಾಂಡದ ಪರಿಣಾಮಗಳು ಇತರತ್ರ ಕಂಡು ಬರುತ್ತವೆ. ಮಿಂಚಿ ಹೋಗುವ ಮೊದಲೆ ಅವರು ವಿವೇಕತನದಿಂದ ತಮ್ಮ ಕಾಯಕ ನಿಲ್ಲಿಸಿ ತಮ್ಮ ತಪ್ಪನ್ನರಿತುಕೊಂಡರೆ ನಾವೆಲ್ಲ ಬ್ರಿಟಿಶರ ಪಾಶದಿಂದ ಮುಕ್ತರಾಗಿ ಪರಸ್ಪರರಲ್ಲಿ ಸೌಹಾರ್ದ ಸಂಬಂಧ ಬೆಳಸಿಕೊಳ್ಳಲನುವಾಗುವದೆಂದೂ ಅವರು ಹೇಳಿದ್ದಾರೆ. ಬ್ಯಾ. ಜಿನ್ನಾರವರು ದಿಲ್ಲಿಯಲ್ಲಿ ಕೂಡಿದ ಮುಸಲ್ಮಾನರ ಸಭೆಯಲ್ಲಿ ಮಾತಾಡುತ್ತ ಮುಸ್ಲಿಂರು ಶೂರರಿದ್ದಾರೆ. ಆದರೆ ಅವರೀಗ ತಮ್ಮ ಮನೆಯನ್ನು ಕಾಪಾಡಿಕೊಳ್ಳಬೇಕಾಗಿದೆ. ನಾನು ಹೋದಲ್ಲೆಲ್ಲ 'ನಿಮ್ಮ ಆಜ್ಞೆಯ ದಾರಿ ಕಾಯುತಿದ್ದೇವೆ' ಎಂದವರು ಹೇಳುತಿದ್ದಾರೆ. ಆದರೆ ಸಂಪೂರ್ಣ ಸಿದ್ಧತೆಯಾಗಿದೆಂದು ಮನಗಂಡ ಹೊರತು ಆಜ್ಞೆ ಕೊಟ್ಟರೆ ನಾನು ಸೇನಾಪತಿಯಾಗದೆ ಅಪರಾಧಿಯಾದೇನು. ಮೊದಲು ನಿಮ್ಮ ಮನೆಯನ್ನು ಸರಿಪಡಿಸಿಕೊಳ್ಳಿರಿ. ಈಗ ತಡವಾಗಿದ್ದರೂ ಇನ್ನೂ ಕಾಲವೇನೂ ಮಿಂಚಿ ಹೋಗಿಲ್ಲ. ಅವಶ್ಯವೆನಿಸಿದರೆ ನಾನು ಬಿಹಾರಕ್ಕೆ ಹೋಗುವೆ ಎಂದು ಮುಂತಾಗಿ ಹೇಳಿದರು.

### ಮುಖಂಡರ ಬಿನ್ನಹ

ಪಂಡಿತ ಜವಾಹರಲಾಲ ನೆಹರೂ, ಬಾಬೂ ರಾಜೇಂದ್ರ ಪ್ರಸಾದ, ಆಚಾರ್ಯ ಕೃಪಲಾನಿಯವರು ಪಾಟಣಾದಲ್ಲಿ ಬಂಕೀಪುರ ಮೈದಿನದಲ್ಲಿ ಕೂಡಿದ ಪ್ರಚಂಡ ಸಭೆಯಲ್ಲಿ ಭಾಷಣ ಮಾಡುತ್ತ ಬಿಹಾರಿಗಳು ಹೇಯವಾದ ಕೃತಿಗಳಿಂದ ಅಲಿಪ್ತರಾಗುಳಿಯಬೇಕೆಂದೂ ಇಂಥ ಕೃತಿಗಳಿಂದ ದಿಲ್ಲಿಯು ದೂರಾಗಿದೆಯೆಂದೂ ಮಹಾತ್ಮರ ಮರಣಕ್ಕೆ ಕಾರಣರಾಗಿ ಪ್ರಾಂತಕ್ಕೆ ಕಲಂಕ ತಂದುಕೊಳ್ಳಬೇಡಿರೆಂದೂ ಮುಂತಾಗಿ ಬಿನ್ನವಿಸಿಕೊಂಡಿದ್ದಾರೆ.

# ಹಿಂದುಸ್ತಾನದಲ್ಲಿಯ ದೊಂಬಿಗಳು

## ಬಿಹಾರದಲ್ಲಿ

ಬಳರಿಹಬ್ಬ ಸುಸೂತ್ರ ಸಾಗಿತು. ಗಯಾ, ಪಾಟಣಾ, ಮತ್ತು ಮೊಂಗೀರ ಜಿಲ್ಹೆಗಳಲ್ಲಿಯ ದೊಂಬಿ ಪ್ರದೇಶದ ಸ್ಥಿತಿ ಇದ್ದಂತೆ ಇದೆ. ಪಾಟಣಾ ಜಿಲ್ಹೆಯ ಅಗರಗುಸಾ ಭಾಗದಲ್ಲಿ ಸೈನಿಕರು ದೊಂಬಿಗಾರರ ಮೇಲೆ ಗುಂಡು ಹಾರಿಸಿದ್ದರಿಂದ ಸುಮಾರು ನೂರು ಜನ ಸತ್ತರೆಂದೂ ಅಷ್ಟೇ ಜನ ಗಾಯಗೊಂಡರೆಂದೂ ಅಂದಾಜು ಗಯಾ ಭಾಗದ ಮುಖದಮಪೂರ ಮತ್ತು ಗೋಸಿ ಪೋಲೀಸ ಸ್ಟೇಶನ ಹದ್ದಿಯಲ್ಲಿ ದೊಂಬಿಯಾಗಿ ೩೦-೪೦ ಜನ ಸತ್ತರೆಂದೂ ಸುದ್ದಿ. ಮೊಂಘೀರ ಜಿಲ್ಹೆಯಲ್ಲಿಯ ಜಮಾಲಪುರ ನಗರದಲ್ಲಿ ನವಂಬರ ೪ಕ್ಕೆ ದೊಂಬಿಯಾಗಿ ೨೦ಜನ ಸತ್ತರು. ೨೪ಗಂಟೆ ಕರ್ಫ್ಯೂ ಸಾರಲಾಗಿದೆ. ಪರಿಹಾರ ಕಾರ್ಯ ಕೈಕೊಳ್ಳಲಾಗಿದೆ.

## ಬಂಗಾಲದಲ್ಲಿ

ಧನಬಾದದಲ್ಲಿ ಇತ್ತೀಚಿಗೆ ನಡೆದ ದುರ್ಘಟನೆಗಳಲ್ಲಿ ಕಲ್ಲಿದ್ದಲಿ ಗಣಿಯಲ್ಲಿಯ ೫೦ ಜನ ಸೆರೆಹಿಡಿಯಲ್ಪಟ್ಟಿರುವರು. ಜಾರಿಯಾ ಭಾಗದಲ್ಲಿ ಕರ್ಫ್ಯೂ ಹುಕುಮು ಜಾರಿಯಲ್ಲಿದೆ. ಪೇಟೆಗಳೆಲ್ಲಾ ಮುಚ್ಚಿವೆ.

ಮುಖ್ಯಮಂತ್ರಿಗಳಾದ ಸುಹ್ರವರ್ದಿಯವರು ಮಹಾತ್ಮರ ಭೆಟ್ಟಿತೆಗೆದುಕೊಂಡು ಬಂದ ನಂತರ ಹೊರಡಿಸಿದ ಪ್ರಕಟನೆಯಲ್ಲಿ ಶಾಂತತಾ ಸಮಿತಿಯನ್ನು ಸ್ಥಾಪಿಸುವದರ ಸೂಚನೆಮಾಡಿ ಪ್ರಮುಖ ಹಿಂದುಗಳೆಲ್ಲ ಇದರಲ್ಲಿ ಭಾಗವಹಿಸಿ ಪ್ರಾಂತದಲ್ಲಿ ಶಾಂತತೆಯನ್ನು ಪ್ರಸ್ಥಾಪಿಸುವದರಲ್ಲಿ ಸಹಾಯಕರಾಗಬೇಕೆಂದು ಬಿನ್ನವಿಸಿಕೊಂಡಿದ್ದಾರೆ. ಅವರು ಹೀಗೆ ಶಾಂತಿಸಮಿತಿಯಲ್ಲಿ ಕೂಡಹತ್ತಿದರೆ ಸರಕಾರದ ಬಗ್ಗೆ ಇದ್ದ ಸಂಶಯ ವೃತ್ತಿಯೆಲ್ಲ ದೂರುವಾಗುವದೆಂದೂ ಹೇಳಿದರು. ಈ ಸಮಿತಿಯನ್ನು ಸರಕಾರವೇ ಸ್ಥಾಪಿಸಲಿದ್ದು ಮುಖ್ಯಮಂತ್ರಿಗಳು ಚೇರಮನರಾಗಲಿರುವದರಿಂದ ಅದರ ಸೂಚನೆಗಳು ಕಾರ್ಯರೂಪದಲ್ಲಿ ಬರುವವೆಂಬಲ್ಲಿ ಸಂಶಯವಿಲ್ಲೆಂದು ಮುಂತಾಗಿ ಹೇಳಿರುವರು.

## ಮುಂಬಯಿಯಲ್ಲಿ

ಮುಂಬಯಿಯಲ್ಲಿ ೫ ನೇ ತಾರೀಕು ಈದ ಶಾಂತರೀತಿಯಿಂದ ಜರುಗಿತು. ಒಟ್ಟಾರೆ ೧೨ ಇರಿತಗಳ ವರದಿಯಾಗಿದೆ. ಕಲ್ಲು ಮತ್ತು ಆ್ಯಸಿಡ್ ಘಟನೆಗಳೂ ಆಗಿವೆ. ಕರ್ಫ್ಯೂ ಹುಕುಮು ಮತ್ತೆ ಏಳು ದಿನಗಳ ವರೆಗೆ ಬೆಳೆದಿದ್ದು ಸಾಯಂಕಾಲ ೬॥ ಗಂಟೆಯಿಂದ ಮುಂಜಾನೆ ೬ ರ ವರೆಗೆ ಕರ್ಫ್ಯೂ ಇರುವದು. ೫ ನೇ ತಾ. ಸಾಯಂಕಾಲದ ವರೆಗೆ ೫ ಜನ ಸತ್ತಿದ್ದು ೩೬ ಜನರಿಗೆ ಗಾಯಗಳಾಗಿವೆ. ೧೪ ಜನರ ಮೈ ಆ್ಯಸಿಡಿನಿಂದ ಸುಟ್ಟಿವೆ ಮಹಾರಬಾವಡಿ ಮತ್ತು ಪಾಯಧೂನಿಯಲ್ಲಿ ಕೂಡಿ ೩ ಪವಿತ್ರ ಸ್ಥಳಗಳು ನಾಶಮಾಡಲ್ಪಟ್ಟಿವೆ. ೩೦ ಜನ ಸೆರೆಹಿಡಿಯಲ್ಪಟ್ಟಿದ್ದಾರೆ.

ಕುಲಾಬಾ ಜಿಲ್ಹೆಯಲ್ಲಿ ಇತ್ತೀಚೆ ಅತ್ಯಾಚಾರ ಹೆಚ್ಚಿದ್ದರಿಂದ ಗಂಡಾಂತರ ಪರಿಸ್ಥಿತಿಯನ್ನು ಸಾರಲಾಗಿದೆ. ಕೋಲಾಡದಲ್ಲಿ ಮೋಟಾರ ಬಸ್ಸಿನ ಮೇಲೆ ಹಲ್ಲೆಯಾಗಿ ಒಬ್ಬನು ತಿವಿತದಿಂದ ಮೃತನಾದನು. ಮತ್ತು ಬೇರೆ ೫ ಜನರಿಗೆ ಗಾಯಗಳಾಗಿವೆ. ನಾಗೋಥನಾದಲ್ಲಿ ಗೋಳೀಬಾರ ಮಾಡಬೇಕಾಯಿತು. ೧೬ ಜನರಿಗೆ ಗಾಯಗಳಾಗಿವೆ. ಗಾಂಧಾ ಹಳ್ಳಿಯಲ್ಲಿ ೧೨ ಜನ ಸತ್ತರು. ಮತ್ತು ೧೦ ಜನರಿಗೆ ಗಾಯಗಳಾಗಿವೆ. ಅನೇಕ ಮನೆಗಳು ಭಸ್ಮವಾಗಿವೆ.

ಮುಂಬಯಿಯಲ್ಲಿ ೪ ನೇ ತಾರೀಕು ೧೨ ಇರಿತಗಳು ಸಂಭವಿಸಿವೆ. ಕಲ್ಲಿನ ಏಟದಿಂದ ಒಬ್ಬನು ಸತ್ತನು.

ಪುಣೆಯ ಸಮೀಪದಲ್ಲಿರುವ ಇಂದೂರಿ ಎಂಬ ಹಳ್ಳಿಯಲ್ಲಿ ಕಳೆದ ಬುಧವಾರ ದೊಂಬಿಯಾಗಿ ಇಬ್ಬರು ಮರಣಹೊಂದಿದುರ ಪರಿಣಾಮವಾಗಿ ಪುಣೆಯ ವಾತಾವರಣ ಸ್ವಲ್ಪ ಗಂಭೀರವಾಗಿತ್ತು. ಅದರ ಪರಿಣಾಮವಾಗಿ ಇಬ್ಬರಿಗೆ ಇರಿತದ ಗಾಯಗಳಾದವು. ೧ ನೇ ತಾರೀಕು ಚೂರಿ ಇರಿತದಿಂದ ಒಬ್ಬ ಸತ್ತನು.

ಮುಂಬಯಿ ಸರಕಾರದವರು ಶಾಂತಿ ಸಂರಕ್ಷಕದಲದ ಆರ್ಡಿನನ್ಸನ್ನು ಜಾರಿಯಲ್ಲಿ ತಂದಿರುವರು. ಜನತೆಯ ವಿತ್ತ, ಜೀವಿತಗಳನ್ನು ರಕ್ಷಿಸುವ ಉಪಾಯಗಳಲ್ಲಿ ಇದೊಂದಾಗಿದೆಂದು ಮುಖ್ಯಮಂತ್ರಿ ಖೇರರವರು ಆಕಾಶವಾಣಿ ಭಾಷಣದಲ್ಲಿ ಹೇಳಿದರು.

## ಮಧ್ಯಪ್ರಾಂತದಲ್ಲಿ

ಅಮರಾವತಿಯಲ್ಲಿ ೩ ನೇ ತಾರೀಕು ಇರಿತದಿಂದ ಒಬ್ಬ ಸತ್ತನು. ಕರ್ಫ್ಯೂ ಮತ್ತು ೧೪೪ ಕಲಮು ಜಾರಿ ಮಾಡಲ್ಪಟ್ಟಿವೆ.

ಬ್ಯಾ. ಜಿನ್ನಾರವರು ಪ್ರಕಟನೆ ಹೊರಡಿಸಿ ಜಬಲಪುರ, ಅಮರಾವತಿ ಬದ್ನೇರಾ ಮತ್ತು ಕಾಟಾಣಾಗಳಲ್ಲಿ ಮುಸಲ್ಮಾನರ ಛಲನೆಯ ಬಗ್ಗೆ ಮುಖ್ಯ ಮಂತ್ರಿಗಳ ಲಕ್ಷವನ್ನು ಎಳೆದಿರುವರು. ನಿಃಶಸ್ತ್ರ ಮುಸಲ್ಮಾನರ ಮೇಲೆ ಆದ ದಾಳಿಯಿಂದ ಹಲವು ಜನರು ಸಾವುನೋವುಗಳಿಗೀಡಾಗಿರುವರೆಂದೂ ಅವರು ಬರೆದಿದ್ದಾರೆ.

## ಸಂಯುಕ್ತಪ್ರಾಂತದಲ್ಲಿ

ನವಂಬರ ೬ ನೇ ತಾರೀಕು ಬನಾರಸದಲ್ಲಿ ಸಣ್ಣ ಸ್ವರೂಪದ ಹಿಂದೂ ಮುಸಲ್ಮಾನ ದೊಂಬಿಯಾಗಿ ಇಬ್ಬರು ಇರಿಯಲ್ಪಟ್ಟರು. ನಾಲ್ಕು ಜನರಿಗೆ ಲಾಠಿ ಹೊಡೆತ ಬಿದ್ದವು. ಇರಿತದ ಗಾಯಗಳಿಂದ ಒಬ್ಬನು ಸತ್ತನು. ಸಬ್ ಇನಸ್ಪೆಕ್ಟರರು ಹವೆಯಲ್ಲಿ ಗುಂಡು ಹಾರಿಸಬೇಕಾಯಿತು. ರಾತ್ರಿ ೯ ಗಂಟೆಯೊಳಗಾಗಿ ವಾಹನಗಳ ಓಡಾಟವೆಲ್ಲ ನಿಂತಿತು. ಜನರ ಓಡಾಟವೂ ನಿಂತಿತು. ೧೦ ಗಂಟೆಗೆ ಒಂದು ಹೆಣ ಮತ್ತು ಇರಿತದಿಂದ ಗಾಯಗೊಂಡ ೭ ಜನರನ್ನು ಆಸ್ಪತ್ರೆಗೆ ತರಲಾಯಿತು.

## ಸಂಸ್ಥಾನಗಳಲ್ಲಿ

ಗ್ವಾಲ್ಹೇರದಲ್ಲಿ ಅಕ್ಟೋಬರ ೩೧ ರಿಂದ ಪ್ರಾರಂಭವಾದ ಇರಿತಗಳ ಪರಿಣಾಮವಾಗಿ ೪ ಜನ ಸತ್ತಿದ್ದು ೬ ಜನ ಗಾಯಗೊಂಡಿರುವರು. ಆಹಾರ ಪದಾರ್ಥಗಳು ವಿಷ ಮಿಶ್ರಿತವಾಗಿವೆಂಬ ಸುದ್ದಿ ಅಕ್ಟೋಬರ ೩೧ ರಿಂದ ಹಬ್ಬಿದೆ.

## ಮೈಸೂರು ಕಾಂಗ್ರೆಸ ಅಧಿವೇಶನ

“ಶಾಸನ ಬದ್ಧವಾದ ಎಲ್ಲ ವಿಧಾನಗಳನ್ನೂ ನಾವು ಮುಗಿಸಿದ್ದೇವೆ. ಅಸಾಧಾರಣ ಸಹನೆಯನ್ನೂ ತೋರಿಸಿದ್ದೇವೆ. ಆದರೂ ನಮ್ಮ ಬೇಡಿಕೆಗಳು ಉಪೇಕ್ಷಿಸಲ್ಪಟ್ಟಿವೆ. ಹೊಣೆಗಾರ ಸರಕಾರದ ಬೇಡಿಕೆಯನ್ನು ನಡೆಸಿಕೊಡುವದು ಹಾಗಿರಲಿ, ಅದರ ಹೆಸರು ಕೂಡ ಕೇಳಬರುತ್ತಿಲ್ಲ.” ಎಂದು ಶ್ರೀ ಕ್ಯಾಸಂಬಳಿ ಚಂಗಲರಾಯರೆಡ್ಡಿಯವರು ಬೆಂಗಳೂರಿನಲ್ಲಿ ತಾ. ೨ಕ್ಕೆ ಜರುಗಿದ ಮೈಸೂರು ಕಾಂಗ್ರೆಸ ಅಧಿವೇಶನದ ಅಧ್ಯಕ್ಷಸ್ಥಾನದಿಂದ ಮಾತಾಡುತ್ತ ಹೇಳಿದರು.

“ನಮ್ಮ ಶಕ್ತಿ ಸಂಯಮಗಳಿಂದ ಮಾತ್ರ ಪರಿಮಿತ ಹೋರಾಟವನ್ನು ಪ್ರಾರಂಭಿಸುವದು ಈಗ ಅನಿವಾರ್ಯವಾಗಿದೆ. ನಮಗೆ ಹೋರಾಟ ಬೇಕಾಗಿಲ್ಲ. ಸಾಧ್ಯವಿದ್ದರೆ ಅದನ್ನು ತಪ್ಪಿಸಲು ನಾವು ಪ್ರಯತ್ನಿಸುವೆವು.” ಎಂದವರು ಹೇಳಿರುವರಲ್ಲದೆ ನರೇಂದ್ರರ ಸಂಧಾನ ಸಮಿತಿಯು ಘಟನಾ ಸಮಿತಿಯಲ್ಲಿ ಕೈಕೊಳ್ಳಬಹುದಾದ ತೀರ್ಮಾನಗಳಿಗೆ ಪ್ರಜರ ಒಪ್ಪಿಗೆಯಿಲ್ಲೆಂದು ಸಾರಿರುವರು. ಕರ್ನಾಟಕ ಏಕೀಕರಣವನ್ನು ಶ್ರೀ ರೆಡ್ಡಿಯವರು ಪ್ರಸ್ತಾಪಿಸಿ, ಇದಕ್ಕೆ ಮೈಸೂರಿನ ಆಡಳಿತ ಪದ್ಧತಿ ಆತಂಕವಾಗಿರುವದು. ಕಾರಣ ಸಕಲ ಪಕ್ಷಗಳು ಒಪ್ಪುವದಾದರೆ ಮೈಸೂರ ಮಹಾರಾಜರು ಶಾಸನಬದ್ಧ ಅರಸರಾಗುವದು ಒಳಿತು ಎಂದು ಸೂಚಿಸಿರುವರು. ಮೈಸೂರ ಸಂಸ್ಥಾನ ಮತ್ತು ಇನ್ನಿತರ ಕರ್ನಾಟಕ ಜಿಲ್ಲೆಗಳ ಸಂಯುಕ್ತ ರಾಜ್ಯ ಸ್ಥಾಪಿಸಬೇಕೆಂದು ಅಭಿಪ್ರಾಯ ಪಟ್ಟಿರುವರು.

ಅಧಿವೇಶನವನ್ನು ಸಮಾಪ್ತಿಗೊಳಿಸುತ್ತಾ ಮಾಡಿದ ಭಾಷಣದಲ್ಲಿ ಮೈಸೂರಿನಲ್ಲಿ ಶ್ರೀಮನ್ಮಹಾರಾಜರ ಕೃಪಾಶ್ರಯದಲ್ಲಿ ಸಂಪೂರ್ಣ ಜವಾಬ್ದಾರ ಸರ್ಕಾರ ಸ್ಥಾಪಿಸಲು ಎಲ್ಲ ಪಕ್ಷಗಳಾದರೂ ಒಂದೇ ಭಾವನೆಯಿಂದ ಲಕ್ಷ ಕೊಡಬೇಕು. ಎಲ್ಲ ಪಂಗಡಗಳಿಗೂ ನ್ಯಾಯವಾದ ಸ್ಥಾನಮಾನಗಳನ್ನು ಕೊಡಲಾಗುವದು. ಕಾಂಗ್ರೆಸಿನ ಸ್ವಾತಂತ್ರ್ಯ ಸಾಧನೆಯ ಮೂಲ ತಂತ್ರವು ಸಂಸ್ಥಾನದ ಮೂಲೆ ಮೂಲೆಗೂ ಹರಡಬೇಕು” ಎಂದು ಪ್ರತಿಪಾದಿಸಿದರು.

ಶ್ರೀ. ಕೆ. ಟಿ. ಭಾಷ್ಯಮರು ಸ್ವಾಗತಾಧ್ಯಕ್ಷರಾಗಿದ್ದರು.

### ನಿರ್ಣಯಗಳು

ಶ್ರೀ ಮನ್ಮಹಾರಾಜರ ಕೃಪಾಶ್ರಯದಲ್ಲಿ ಹೊಣೆಗಾರ ಸರಕಾರ ತಲೆಯೆತ್ತಬೇಕೆಂದು ಪ್ರತಿಪಾದಿಸುವ, ಇದನ್ನು ಸಾಧಿಸಲು ಎಲ್ಲ ಕ್ರಮಗಳನ್ನೂ— ಆವಶ್ಯವಿದ್ದರೆ ಸತ್ಯಾಗ್ರಹವನ್ನೂ— ಕೈಕೊಳ್ಳಲು ಕಾರ್ಯ ಸಮಿತಿಗೆ ಅಧಿಕಾರ ಕೊಡುವ ಗೊತ್ತುವಳಿಯು ಸರ್ವಾನುಮತದಿಂದ ಪಾಸಾಯಿತು. ಶ್ರೀ. ಕೆ. ಟಿ. ಭಾಷ್ಯಮರು ಇದನ್ನು ಮಂಡಿಸಿದರು.

ಕಾಂಗ್ರೆಸಿನ ಮುಂದಿನ ಅಧಿವೇಶನವು ಹಾಸನದಲ್ಲಿ ಜರಗಬೇಕೆಂದು ನಿರ್ಣಯವಾಯಿತು.

ಘಟನಾ ಸಮಿತಿಗೆ ಸಂಬಂಧಿಸಿದ ಗೊತ್ತುವಳಿಯಲ್ಲಿ ಬ್ರಿಟಿಶಮಂತ್ರಿತ್ರಯವು ಸಂಸ್ಥಾನೀ ಪ್ರಜರ ಸಲಹೆಯನ್ನು ತೆಗೆದುಕೊಳ್ಳದೆ ಯೋಜನೆಯನ್ನು ತಯಾರಿಸಿದೆಂದೂ ನರೇಂದ್ರರ ಸಂಧಾನ ಸಮಿತಿಯು ಪ್ರಜಾಸತ್ತೆಯ ತಳಹದಿಯಮೇಲೆ ಪುನರ್ಘಟಿತವಾಗಬೇಕೆಂದೂ ಕಾಂಗ್ರೆಸು ಪ್ರತಿಪಾದಿಸಿತು.

ಎರಡು ದಿನಗಳ ಕಾರ್ಯಕಲಾಪಗಳ ನಂತರ ಅಧಿವೇಶನವು ಕೊನೆಗಂಡಿತು.




ಮುಂಬಯಿ ೪

ಮುಂಬಯಿ ಸ್ಟಾಕಪೇಟೆ ಸ್ಥಿರ ಸ್ಥಿತಿಯಲ್ಲಿ ಪ್ರಾರಂಭವಾಯಿತು. ಕಲಕತ್ತೆ ಪರಿಸ್ಥಿತಿ ಸುಧಾರಿಸಿದ ಸುದ್ದಿ ಬಂದದ್ದರಿಂದ ನಿನ್ನೆಗಿಂತ ಪೇಟೆ ಸುಸ್ಥಿತಿಯಲ್ಲಿ ಸುರುವಾಯಿತು. ಆದರೆ ಮುಂದೆ ವ್ಯಾಪಾರ ನಿಯಂತ್ರಿತವಾಗಿಯೇ ಸಾಗಿತು. ಟಾಟಾ ಸ್ಟೀಲ ಡೆಫರ್ಡ ಶೇರುಗಳು ೨೯೨೦ ಕ್ಕೆ ಸುರುವಾಗಿ ೨೯೦೫ ಕ್ಕಿಳಿದು ೨೯೧೦ ಕ್ಕೆ ಸ್ಥಿರವಾದವು. ಆರ್ಡಿನರಿ ಶೇರುಗಳು ೫೨೮ ಕ್ಕೆ ಪ್ರಾರಂಭವಾಗಿ ೫೨೬ ಕ್ಕೆ ನಿಂತವು. ಡಾಯಿಂಗ ಶೇರುಗಳು ೩೦೬೦ ಕ್ಕೆ ಪ್ರಾರಂಭವಾಗಿ ೩೦೨೦ ಕ್ಕಿಳಿದವು. ಕೋಹಿನೂರ ೯೪೮ ಕ್ಕೆ ಪ್ರಾರಂಭವಾಗಿ ೯೪೭ ಕ್ಕೆ ಮುಚ್ಚಿದವು. ಪೇಟೆ ಮುಚ್ಚುವ ಕಾಲಕ್ಕೆ ಪರಿಸ್ಥಿತಿ ಸ್ವಲ್ಪ ಸುಧಾರಿಸಿತು, ತಾತಾ ಸ್ಟೀಲ ಡೆಫರ್ಡ ಶೇರು ೨೯೧೨ ಕ್ಕೆ ಮಾರಾಟವಾದರೆ ಆರ್ಡಿನರಿ ಶೇರುಗಳು ೫೨೬ ಕ್ಕೆ ಹೋದವು. ಅಸೋಸಿಂಪ್ಲೆಕ್ಸ ೪೪೪ ಕ್ಕೆ ಮಾರಾಟಾದುವು. ಅಸೋಸಿಯೇಟೆಡ್ ಸಿಮೆಂಟ ಪಾಲುಗಳು ೨೪೫-೮-೦ ವರೆಗೇರಿದವು.

ಮುಂಬಯಿ ಡಾಯಿಂಗ ಗಿರಣಿ ೩೦೩೦, ಸೆಂಚರಿ ೧೧೭೦; ನಾಗಪುರ ೪೨೫, ಸ್ವದೇಶಿ ೭೭೫ ಗೋಕಾಕ ಎಕ್ಸಡಿ ೪೦೨; ಫೋರ್ಕ್ಸ ೧೨೫೦, ಮೈಸೂರ, ೩೨೦—೧೦ ಫಿನ್ಲೆ ೪೨೪, ಇಂದೂರ ೮೦೦ ತಾತಾಹಾಯಡ್ರೊ ೨೧೬, ಅಂಧ್ರವ್ಯಾಲಿ ಎಕ್ಸಡಿ ೧೯೩೮-೮-೦ ತಾತಾ ಪಾವರ ಎಕ್ಸಡಿ ೧೯೬೦ ಟ್ರ್ಯಾಮ ಎಕ್ಸಡಿ ೧೨೬-೪-೦

### ಬ್ಯಾಂಕು

ರಿಝರ್ವ ೧೫೩—೮—೦ ಇಂಪೀರಿಯಲ್ ೨೮೫೫, ಸೆಂಟ್ರಲ್ ೧೩೨-೪-೦ ನ್ಯಾಶನಲ್ ಸೆವಿಂಗ್ಸ (ಪೂರ್ಣ ಕೊಟ್ಟದ್ದು) ೯೨, (ಅರ್ಧ ಕೊಟ್ಟದ್ದು) ೫೪—೯—೦

### ಬೆಳ್ಳಿ—ಚಿನ್ನ

ಇಂದು ಚಿನ್ನದ ಪೇಟೆಯಲ್ಲಿ ಹರತಾಳವಿದ್ದುದರಿಂದ ವ್ಯಾಪಾರ ನಡೆಯಲಿಲ್ಲ. ಖಾಸಗಿ ರೀತಿಯಿಂದ ಕೆಲ ವ್ಯವಹಾರ ನಡೆಯಿತು. ಪೇಟೆ ಮುಚ್ಚುವಾಗ ಧಾರಣೆ ಈ ರೀತಿಯಿದ್ದಿತು. ವಾಯದೆ ಬೆಳ್ಳಿ ೧೫೬—೮—೦ ಮತ್ತು ಬಂಗಾರ ೮೬—೪—೦ ತಯಾರಿ ಭಂಗಾರ ೯೭ ರೂ. ತಯಾರಿ ಬೆಳ್ಳಿ ೧೫೯ ರೂ. ಸಾವರಿನ ೬೭-೮-೦

### ಅರಳೆ

| | |
|---|---|
| ಅಯ ಸಿ ಸಿ ಜಾನೆವರಿ | ೪೯೨-೦-೦ |
| ಆಯ ಸಿ ಸಿ ಮಾರ್ಚ | ೪೬೯-೮-೦ |
| ಆಯ ಸಿ ಸಿ ಮೇ | ೪೭೭-೦-೦ |
| ಆಯ ಸಿ ಸಿ ಜುಲೈ | ೪೮೪-೧೨-೦ |

### ಎಣ್ಣೆಕಾಳು

| | |
|---|---|
| ಶೇಂಗಾ | ೧೧೦-೦-೦ |
| ಆಗಸಿ | ೨೩-೮-೦ |

### ಸಾಂಗಲಿ ಪೇಟೆ

| | |
|---|---|
| ಬೆಲ್ಲ ಬಂಗಾಲಿ ಮಣ ರೂ. | ೧೪-೧೬ |
| ಅರಿಷಣ ಹೇರು | ೯೩-೯೫ |
| ಶೇಂಗಾ ಖಂಡಿ ,, | ೯೬-೧೦೦ |
| ಮೆಣಸಿನಕಾಯಿ ಹೇರು ,, | ೧೧೦-೧೬೦ |
| ಮಿರ್ಜಿ ತಂಬಾಕು ಹೇರು | ೧೦೦-೨೦೦ |
| ತಂಬಾಕ ಪಂಢರಪುರಿ ,, | ೧೫೦-೨೫೦ |
| ತಂಬಾಕು ಅಕೋಳ(ಹೇರು) | ೨೫೦-೩೭೫ |

### ಶಿವಮೊಗ್ಗೆ

| | |
|---|---|
| ಅಡಿಕೆ ದೇಶಾವರ ನಂ ೧ಮಣ ೧ಕ್ಕೆ | ೩೭-೩೮ |
| ,, ,, ೨ | ೩೫-೩೭ |
| ,, ,, ೩ | ೩೪-೩೫ |
| ರಾಜಾ ಅಲವು | ೩೪-೩೬ |
| ಅನ್ನಾವರ | ೩೧-೩೪ |
| ಬೆಟ್ಟೆ | ೨೪-೨೫ |
| ಬೆಟ್ಟೆ ವಂತಿ | ೨೬-೨೭ |
| ನುಲಿ | ೩೬-೩೮ |

ಅಡಿಕೆಗೆ ಪೇಟೆಯಲ್ಲಿ ಹೆಚ್ಚು ಬೇಡಿಕೆ ಇದೆ ಹೋದ ವರುಷಕ್ಕಿಂತ ಈ ಸಲ ಕಡಿಮೆ ಅಡಿಕೆ ಪೇಟೆಗೆ ಬಂದಿದೆ. ಹೋದ ವರುಷದ ಅರ್ಧದಷ್ಟು ಬೆಳೆ ಮಾತ್ರ ಬಂದಿದೆ. ಮಳೆ ಹತ್ತಿದ್ದರಿಂದ ಅಡಿಕೆ ಹದ ಗೊಳಿಸಲು ತೊಂದರೆಯಾಗಹತ್ತಿದೆ.

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೯೫-೩೦೦ |
| ,, | ನಂ. ೨ | ೨೮೫-೨೯೦ |
| ,, | ನಂ. ೩ | ೨೭೫-೨೮೦ |
| ಅಪ್ಲಂಡ ಹತ್ತಿ | | ೨೬೦-೨೭೦ |
| ಜಿನ | | ೨೧೦-೨೨೦ |
| ಸಾಜಿನ | | ೨೦೦-೨೦೫ |
| ಡಬಲರೋಲ | | ೧೯೫-೨೧೦ |

### ಉಡುಪಿಯಲ್ಲಿ ಮಂತ್ರಿಗಳು

ದಿನಾಂಕ ೨ ಕ್ಕೆ ಮದ್ರಾಸ ವಿದ್ಯಾಮಂತ್ರಿ ಶ್ರೀ ಚೆಟ್ಟಿಯಾರರು ಉಡುಪಿಗೆ ಆಗಮಿಸಿದಾಗ ಸ್ಥಳಿಕ ಪ್ರಮುಖರು ಸಂಭ್ರಮದ ಸ್ವಾಗತವಿತ್ತರು. ಮುಕುಂದ ನಿವಾಸದಲ್ಲಿ ಕೂಡಿದ ಸಭೆಯಲ್ಲಿ ಅಕೆಡಮಿ ಆಫ್ ಜನರಲ್ ಎಜ್ಯುಕೇಶನನವರು ಅರ್ಪಿಸಿದ ಮನವಿಗೆ ಶ್ರೀ ಅವಿನಾಶಲಿಂಗಮರು ಉತ್ತರ ಕೊಡುತ್ತ ಈ ಸೂಚನೆಗಳು ವಿಚಾರಣೀಯವಾಗಿದ್ದು ಅವುಗಳನ್ನು ವಿಚಾರಿಸುವದಾಗಿ ಆಶ್ವಾಸನವಿತ್ತರು. ಬಳಿಕ ಸ್ಥಳಿಕ ಹೈಸ್ಕೂಲುಗಳನ್ನು ಸಂದರ್ಶಿಸಿ ವಿದ್ಯಾರ್ಥಿಗಳಿಗೆ ಸದುಪದೇಶವಿತ್ತರು.







# ಸ್ವಾತ್ಮನಿವೇದನ

( ಶ್ರೀಕೃಷ್ಣ ಪಾಟೀಲ ಕಲಾಮಂಟಪ ಬೆಳಗಾವಿ )

ಡಾಕ್ಟರರು ರೋಗಿಯ ಕೋಣೆಯ ಹೊರಗೆ ಬಂದು ಪಡಸಾಲೆಯಲ್ಲಿಯ ಒಂದು ಕುರ್ಚಿಯ ಮೇಲೆ ಕುಳಿತರು. ಅನಂಗರಂಗನು ಇಳಿ ಮೋರೆಯಿಂದ ಹಿಂದಿಂದೆ ಬಂದು ಎದುರು ಕುರ್ಚಿಯ ಮೇಲೆ ಕುಳಿತನು. ಕೆಲ ನಿಮಿಷದ ವರೆಗೆ ಯಾರೂ ಮಾತಾಡಲಿಲ್ಲ. ಡಾಕ್ಟರರು ಒಂದು ಬಿಸಿಯುಸಿರುಗರೆದು ಮೌನವನ್ನು ಮುರಿಯುತ್ತ—

—ಅನಂಗರಂಗ... ಎಂದರು.

ರಂಗನು ಮುಖವೆತ್ತಿ ತೀರ ಉದಾಸೀನತೆಯಿಂದ ಏನೆಂದ.

—ಒಂದು ವಿಷದ ಮಾತನ್ನು ಆಡಿದರೆ ನೀನು ತಾಳಿಕೊಳ್ಳುವಿಯಾ?

ಮಾತಿನಲ್ಲಿ ತೀಕ್ಷ್ಣ ಕಠೋರತೆಯಿದ್ದಿತು.

ಅನಂಗನು ತಬ್ಬಿಬ್ಬಾಗಿ ಡಾಕ್ಟರರನ್ನು ನೋಡಹತ್ತಿದನು.

—ತಾಳುವೆಯಾ? ಮತ್ತೆ ಕೇಳಿದರು.

—ಡಾಕ್ಟರ, ಆಕೆಯನ್ನು ಬದುಕಿಸಬೇಕು.

—ಅದಕ್ಕಾಗಿ ನಾನು ಈ ವರೆಗೆ ಪ್ರಯತ್ನಿಸುತ್ತ ಬಂದಿರುವೆ. ದಿನಗಳನ್ನು ಎಣಿಸಿ ಹೇಳಬಲ್ಲೆಯಾ?

—ಡಾಕ್ಟರ... ಮಾತಿನಲ್ಲಿ ಮರುಕು ಇದ್ದಿತು.

—ಕೇಳು...

—ಏನು?

—ಲಕ್ಷಣಾನನ್ನು ನೀನೇ ಕೊಂದೆ ಎಂದು ಆಡಿದರೆ ನೀನು ಒಪ್ಪಬೇಕು.

—ಡಾಕ್ಟರ! ಅಪರಾಧಿಯಂತೆ ಬಾಯಿ ತೆರೆದನು.

—ಪರಿಶುದ್ಧ ಬಂಗಾರದ ಪುತ್ಥಳಿಯಂತೆ ನಿನ್ನ ಮನೆಯ ಹೊಸ್ತಿಲಲ್ಲಿ ಕಾಲಿಕ್ಕಿದಳು. ಹಿಂದು ಗೃಹಿಣಿಗೆ ಚ್ಯುತಿಯಾಗದಂತೆ ನಡೆದು ಬಂದಳು. ನಿನ್ನ ಛಿದ್ರ ಸಂಸಾರದ ನೂರು ತೂತುಗಳನ್ನು ಮೌನದಿಂದ ಮುಚ್ಚುತಂದಳು. ನಿನ್ನ ಸಾವಿರ ಅಗೌರವದ ತಪ್ಪುಗಳನ್ನು ನಗೆಯಿಂದ ಒರೆಸಿ ತೆಗೆದಳು. ಆದರೆ ಅವಳಿಗೆ ಪ್ರತಿಫಲವಾಗಿ ನೀನು ಏನು ಕೊಟ್ಟೆ!

ಅನಂಗರಂಗನು ತಲೆ ಹಿಡಿದು ಕಲ್ಲಿನ ಪ್ರತಿಮೆಯಂತೆ ಹಾಗೇ ಕುಳಿತಿದ್ದನು.

—ರಂಗ ಮಾತಾಡು. ಅವಳ ಸಾತ್ವಿಕ ಸೌಂದರ್ಯವು, ಗಾಂಭೀರ್ಯ ಪ್ರವೃತ್ತಿಯು, ಮುಂಜುಳ ಮಾತುಗಳು, ತಾಳ್ಮೆಯ ತೀರವು, ನಗೆಯಮಲ್ಲಿಗೆಯು, ಹೆಣ್ಣುತನದ ಹಿರಿಮೆಯು ನಿನ್ನ ವ್ಯಭಿಚಾರವೃತ್ತಿಗೆ ಎಳ್ಳಷ್ಟು ಸಹ ಅಡ್ಡಗಾಲಿಕ್ಕಿಲ್ಲಲಿಲ್ಲ. ನಿಂತರೂ ನೀನು ಒಡೆದು, ಹರಿದು ಹಾರಿ ಹೋದೆ; ಹೋಗು. ಹೋಗು. ಆದರೆ ತಿರುಗಿ ಮನೆಗೆ ಏನು ತಂದೆ! ಅತಿ ದಾರಿದ್ರ್ಯ, ಮಹಾರೋಗ, ಅಪನಂಬಿಕೆ, ಅಲೌಕಿಕತೆ, ಅಲ್ಪಾಯುಷ್ಯ! ಜನರು ನಿನ್ನನ್ನು ಈಗ ಮಹಾದುಷ್ಟನೆಂದು ಕರೆದರೆ ಏನು ಮಾಡುವಿ? ಹುಚ್ಚನಾಯಿಯಂತೆ ಕಚ್ಚಲು ಹೋಗಬಹುದಷ್ಟೇ! ಹೇಳು.

—ಡಾಕ್ಟರ, ನಾನು ತಪ್ಪುಗಾರ. ಕಣ್ಣೊರಸಿಕೊಂಡನು.

—ಅವಳು ತನ್ನ ಕನ್ಯೆತನದ ಆಯುಷ್ಯದಲ್ಲಿ ಗಳಿಸಿ ತಂದ ಸೌಂದರ್ಯವನ್ನು, ಅನುಭವಜನ್ಯ ವಿದ್ಯೆಯನ್ನು ನೀನು ಹುಳುಕು ಕವಡಿಯಂತೆ ತೂರಿಬಿಟ್ಟೆ. ಬಂಗಾರದ ಪ್ರತಿಮೆಯಂತೆ ಸುಂದರವಾದ, ಅಕಲಂಕವಾದ ಲಕ್ಷಣೆಯು ಇಂದು ಕ್ಷಯ, ಗುಪ್ತ ರೋಗಗಳ ತವರುಮನೆ. ಇದೆಲ್ಲ ನಿನ್ನ ಮಹಾತ್ಮ್ಯೆಯಲ್ಲದೆ ಮತ್ತೇನು? ಹೇಳು ಉತ್ತರ ಕೊಡು.

—ಡಾಕ್ಟರ ಅವಳನ್ನು ಬದುಕಿಸು.

—ಡಾಕ್ಟರರು ಬದುಕುವವರನ್ನು ಬದುಕಿಸುವರೇ ಹೊರತು ಸಾಯ ಹೊರಟವರನ್ನು ಬದುಕಿಸಲಾರರು. ಅದರಲ್ಲಿ ನಿನ್ನಂತವರು ಸಾವಿಗೆ ಭರದಿಂದ ಎಳೆದುಕೊಂಡು ಹೋಗುತ್ತಿರುವಲ್ಲಿ ಮತ್ತೂ ಕಠಿಣ.

—ಡಾಕ್ಟರ, ನನ್ನ ಲಕ್ಷಣೆಯು... ಕಣ್ಣು ಒದ್ದೆಯಾದವು.

—ಈ ಮಾತು ಈ ಹಿಂದೆ ಉದಯಿಸಿದ್ದರೆ ಲಕ್ಷಣಾ ನಿನ್ನ ಬಾಳುವೆಯು ಎಂಥ ರಸಮಯವಾಗುತ್ತಿದ್ದಿತು! ಕಣ್ಣೊರಸಿಕೊಳ್ಳುವರು.

—ಡಾಕ್ಟರ, ಬೇರೆ ಔಷಧವನ್ನೇ ಹಾಕು. ಪರಿಣಾಮವನ್ನು ನಿರೀಕ್ಷಿಸುತ್ತಿರು.

—ಡಾಕ್ಟರ, ನಾನು ಹಾಳಾದೆ.

—ಹಾಳೇಕೆ ಆಗಬೇಕು! ಇವಳು ಹೋದರೆ ಆ ಲಕ್ಷಣೆಯಿಂದ ಮನೆ ತುಂಬಿಸು. ಇಲ್ಲವೆ ನೀನೇ ಆಕೆಯ ಮನೆಯನ್ನು ತುಂಬು. ನಿನ್ನ ಮನೆಯು ಸೂಳೆಗೇರಿಯಲ್ಲಿ ನಿಂತರೇನು ಅಥವಾ ಸೂಳೆಗೇರಿಯು ನಿನ್ನ ಮನೆಗೆ ಬಂದರೇನು? ಯಾರೇನು ಅನ್ನಬೇಕು. ಸಿಟ್ಟಿನಿಂದ ನುಡಿದು ಹೊರಟು ನಿಂತರು.

—ಬೇರೆ ಔಷಧ ಇಲ್ಲವೇ?

—ಉಂಟು. ನೀನು ಪ್ರಾಣ ಕೊಟ್ಟರೆ ಆಕೆ ಬದುಕಬಹುದು! ಎಂದು ನುಡಿದು ಮನೆಯ ಹೊರಗೆ ಬಿದ್ದರು.

—ಇದೇ ಔಷಧವೇ?

ಡಾಕ್ಟರರು ಮಾತಿನ ಆಚೆಗೆ ಹೋಗಿದ್ದರು. ಹೂ! ಎಂದಂತೆ ಕೇಳಿತು. ಅನಂಗರಂಗನು ಪಶ್ಚಾತ್ತಾಪದಿಂದ ತಳಮಳಿಸಿದನು. ಡಾಕ್ಟರರ ಒಂದು ಮಾತೂ ಅಸತ್ಯವಿರಲಿಲ್ಲ. ಮದುವೆಯ ಮುಂದಿನ ಲಕ್ಷಣಾನ ರೂಪು, ವಿದ್ಯೆ, ಅನುಭವ, ಸಹನೆ, ಗಾಂಭೀರ್ಯ, ನಯ, ಭಯ, ವಿವೇಕ, ಒಂದೊಂದು ರೂಪಗೊಂಡು ದಿನಮಾನದಲ್ಲಿ ಸಂಭವಿಸಿದ ಒಂದೊಂದು ಸಂಗತಿ ನಾಟ್ಯಮಾಡಿ ಅಣಕವಾಡಿದವು. ಗಹಗಹಿಸಿ ನಕ್ಕು ಮರೆಯಾದವು. ಆದರೆ ಅವೆಲ್ಲವುಗಳಿಗೆ ತಾನು ಬೇರೊಂದು ವಿರಸವಾಗಿ ತಿಳಿದುಕೊಂಡು ಬಂದ ಪ್ರಜ್ಞೆಯು ಇಂದು ಪ್ರತಿರೋಧಿಯಾಗಿ ನಿಂತು ಬುದ್ಧಿಯನ್ನು ಹಿಂಡಹತ್ತಿತು. ಕಿವಿಯಲ್ಲಿ ತಲೆಯಲ್ಲಿ ತಾಳಗುಟ್ಟಿ ವಿವೇಕದ ಜ್ಯೋತಿಯನ್ನು ಹಿಡಿದು ಹುಚ್ಚ, ಮೂರ್ಖ, ಘಾತಕಿ ಎಂದು ಪ್ರತಿಧ್ವನಿಸ್ಸೆಯ ಹತ್ತಿತು. ಅನಂಗರಂಗನು ಈ ನಿಷ್ಠುರದ್ವಂದ್ವದಲ್ಲಿ ಅಸಹಾಯನಾಗಿ ವಿಚಾರಶೂನ್ಯನಾಗಿ ಪಡಸಾಲೆಯ ತುಂಬ ಶತಪಥ ಹಾಕಹತ್ತಿದನು—ಏನಾದರೇನು? ಬೆನ್ನ ಗೋಡೆಯಮೇಲೂ, ಎದುರು ಗೋಡೆಯಮೇಲೂ ತನ್ನ ಅವಿವೇಕದ ನಗ್ನಚಿತ್ರಗಳೇ ಸುಳಿಸುಳಿಯಾಗಿ ನಿಂತು ಚುಚ್ಚಹತ್ತಿದವು.

ರೋಗಿ ಕೂಗಿದಂತಾಯಿತು ಒಳಗೆ ಹೋದನು. ಲಕ್ಷಣಾ ಹಾಸಿಗೆಯ ಮೇಲೆ ಕಳಾಹೀನೆಯಾಗಿ ಪಿಳುಕುಗಣ್ಣಿನಿಂದ ಮಲಗಿರುವಳು. ಚೆಲ್ಲಿದ ಕೈಕಾಲುಗಳನ್ನು ಮೇಲೆಳೆದುಕೊಳ್ಳಲು ಶಕ್ತಿಯಿಲ್ಲ. ಹಾಸಿಗೆಗೆ ಹೊಂದಿ ಎಲುವು ತೊಗಲಿನ ಒಂದು ಗೂಡಿನಂತೆ ಭಯಾನಕಳಾಗಿ ಹಾಗೆಯೇ ಮಲಗಿರುವಳು. ಆದರೆ ಮುಖದಲ್ಲಿಯ ಸಹನೆ ಗಾಂಭೀರ್ಯ, ನಗೆ ಮುಸುಕು ಹಾಕಿಕೊಂಡಂತೆ ಕಣ್ಣ ಕುಣಿಕೆಯಲ್ಲಿ ಇನ್ನೂ ಸ್ವಲ್ಪಸ್ವಲ್ಪವಾಗಿ ಕಾಣುತ್ತಿವೆ. ಅನಂಗರಂಗನು ಬಂದು ಆಕೆಯ ಪಕ್ಕದಲ್ಲಿ ಕುಳಿತು ಸೀರೆಕೈಗಳನ್ನು ತನ್ನಕೈಯಲ್ಲಿ ಹಿಡಿದು— ಲಕ್ಷಣಾ ಈಗ ಹೇಗಿದೆ? ಎಂದು ಪಶ್ಚಾತ್ತಾಪದಿಂದ ಕೇಳಿದನು.

—ಈಗ ಸರಿಯಿದೆ. ಹಗೆಯಲ್ಲಿಕುಳಿತು ಮಾತಾಡಿದಂತೆ ಕ್ಷೀಣ ಸ್ವರದಲ್ಲಿ ಹೇಳಿದಳು.

—ನನ್ನ ಪ್ರಾಣನನ್ನು ಕೊಟ್ಟರೆ ನೀನು ಬದುಕುವಿಯೆಂದು ಡಾಕ್ಟರರು ಹೇಳಿದರು; ನೀನು ಬದುಕು.

—ನಿಮ್ಮ ಪ್ರಾಣ ತೆಗೆದುಕೊಂಡರೆ ನಾನು ಯಾವ ನರಕಕ್ಕೂ ಅಯೋಗ್ಯಳು.

—ಲಕ್ಷಣಾ, ನಾನು ನಿನ್ನನ್ನು ಕೊಂದೆನು ಪಾಪಿ.

—ಹಾಗೆ ನುಡಿಯಬೇಡಿರಿ. ಯಾರ ಹುಟ್ಟು ಸಾವನ್ನು ಯಾರು ಬರೆಯಬಲ್ಲರು.

—ಲಕ್ಷಣಾ, ನಾನು ಪಾಪಿಯಲ್ಲವೆ!

—ನಾನು ಹಾಗೆ ನುಡಿಯಲಾರೆನು.

—ನನ್ನ ಸಾವಿರ ತಪ್ಪುಗಳನ್ನು ನೀನು ಕಣ್ಣಿಂದ ನೋಡಿದೆಯೇ ವಿನಹ ಒಂದಿಷ ಬುದ್ಧಿಯನ್ನು ಹೇಳಲಿಲ್ಲವೇಕೆ ಲಕ್ಷಣಾ?

—ನಿಮ್ಮ ತಪ್ಪು ನನಗೆ ಕಂಡುಬರಲಿಲ್ಲ ಅ ಬುದ್ಧಿಕೊಡದ್ದಕ್ಕೆ ನೀನು ದೇವರನ್ನು ಹಳಿಯಬೇಕು.

—ನಾನು ವ್ಯಭಿಚಾರಿ ಲಕ್ಷಣಾ!

—ನನಗೆ ನಂಬುಗೆ ಹುಟ್ಟುವಂತೆ ಯಾರೂ ಹೇಳಲಿಲ್ಲ. ಅಲ್ಪಸ್ವಲ್ಪ ಹೇಳಿದ ಮಾತು ನನ್ನ ಕಿವಿಯಲ್ಲಿ ನಿಲ್ಲಲಿಲ್ಲ.

—ನಿನಗೆ ಇಂಥ ಮಹಾರೋಗವನ್ನು ಅಂಟಿಸಿ ಸಾಯಹಚ್ಚಿದ ಹೊಣೆ ನನ್ನ ಮೇಲಿದೆ ಲಕ್ಷಣಾ

—ಹಾಗೇನಿಲ್ಲ ನೀವು ಹಿಡಿದ ಕೈಯ ಆಯುಷ್ಯ ರೇಖೆಯಲ್ಲಿ ನನ್ನ ಈ ವಯಸ್ಸಿಗೆ ಆಪತ್ತಿದೆಯೆಂದು ಚಿಕ್ಕಂದಿನಲ್ಲಿ ನಾನು ಜ್ಯೋತಿಷಿಯಿಂದ ಕೇಳಿಬಲ್ಲೆನು.

—ಲಕ್ಷಣಾ, ನೀನು ಇನ್ನೂ ಐದಾರು ವರುಷ ಬದುಕು.

—ಈ ಅವಸ್ಥೆಯ, ನಾನು ಬದುಕಿದರೆ ನಿಮಗೆ ತೊಂದರೆಯಲ್ಲವೆ?

—ಹಾಗಲ್ಲ ಲಕ್ಷಣಾ, ಇಷ್ಟುದಿನ ನಿನ್ನಕೂಡ ಕೃತಘ್ನನಾಗಿ ನಡೆದ ದೋಷಗಳನ್ನು ತೊಳೆದುಕೊಳ್ಳಬೇಕೆಂದಿರುವೆ, ಸ್ವಲ್ಪದಿನ ಬದುಕು.

—ನನ್ನ ನಾಲಗೆಯು ಹಾಗೆನುಡಿಯದು; ಕಿವಿಯು ಒಪ್ಪದು.

—ಲಕ್ಷಣಾ, ನಿನ್ನ ಸದ್ಗುಣಗಳನ್ನು ನಾನು ಅರಿಯದೆ ಹೋದೆ.

—ತಿರುಗಿ ಕೇಳಿದರೆ ನನ್ನ ಸಾವಿಗೆ ನಾನೇ ಕಾರಣಳು!

—ಇಲ್ಲ; ಸರ್ವಥಾ ಇಲ್ಲ.

—ನಿಮ್ಮ ಮನೆಗೆ ಬಂದಮೇಲೆ ನಿಮ್ಮ ನೆರಳಿನ ಆಶ್ರಯದಲ್ಲಿ ನಿಂತು ನಾನು ಸುಳ್ಳುಹೇಳಲಾರೆನು.

—ಲಕ್ಷಣಾ, ಇಂಥ ಮಾತುಗಳಿಂದ ನನ್ನ ಹೃದಯವನ್ನು ಸೀಳಬೇಡ.

ನಿಮ್ಮ ಮನೆಗೆ ಬಂದು ಹನ್ನೆರಡು ವರುಷಗಳಾದರು ಒಂದಿನ ನಾನು ನಿಮಗೆ ಚುಚ್ಚುಮಾತುಗಳನ್ನಾಡಿಲ್ಲ. ಸಾಯುವ ಮುಂದೂ ಆಡಬಯಸುವದಿಲ್ಲ. ನನ್ನದೊರೆಯೇ! ನನ್ನ ಸಾವಿಗೆ ನಾನೇ ಕಾರಣಳು. ಈ ಮಾತನ್ನು ನಂಬಿರಿ.

—ಹೇಗೆ ನಂಬಲಿ ಲಕ್ಷಣಾ! ಪಾಪಿ, ಕೃತಘ್ನನ ನಂಬಿಗೆಯಿಂದ ಆಗುವದೇನು ?

—ಇಲ್ಲ. ನಂಬಬೇಕು. ನಂಬಲು ಕಾರಣವಿದೆ. ಪ್ರಬಲ ಕಾರಣವಿದೆ.

—ಏನದು? ವಿಷಾದದಿಂದ ಕೇಳಿದನು.

—ನನ್ನ ಕಾಲಬಳಿ ಪೆಟ್ಟಿಗೆಯಲ್ಲಿ ಒಂದು ಪತ್ರವಿದೆ; ತೆಗೆದುಕೊಂಡು ಓದಿರಿ.

ಅನಂಗರಂಗನು ಎದ್ದು ಪತ್ರವನ್ನು ತೆಗೆದುಕೊಂಡನು. ಒಮ್ಮೆ ಓದಿದನು; ತಿರುಗಿ ಓದಿದನು. ಮುಗಿಸಿ ಕಣ್ಣೀರಿಟ್ಟು ಅವಳ ಬಳಿಗೆ ಬಂದು ಮತ್ತೆ ಕೈಹಿಡಿದನು.

—ನಾನೇ ಕಾರಣಳು. ನಾನೇ ಕಾರಣಳು. ನೀವು ನಿರ್ದೋಷಿಗಳು. ಇನ್ನು ಈ ಪಾಪಿಯನ್ನು ಮುಟ್ಟಬೇಡಿರಿ. ದೂರ ಸರಿಯಿರಿ.

—ಲಕ್ಷಣಾ, ನಾನು ಈ ಮಾತಿಗೆ ಒಪ್ಪೆನು. ಸರ್ವಥಾ ಒಪ್ಪೆನು. ಮತ್ತಿಷ್ಟು ಅವಳ ಬಳಿಗೆ ಸರಿದನು.

—ಆ ಪತ್ರವೇ ನನ್ನನ್ನು ಈ ಅವಸ್ಥೆಗೆ ತಂದಿದೆಂಬ ಮಾತನ್ನು ನೀವು ನಂಬಬೇಕಷ್ಟೇ?

—ಲಕ್ಷಣಾ,” ಲಗ್ನಪೂರ್ವದಲ್ಲಿಯ ಹೆಂಡತಿಯ ರೀತಿ-ನೀತಿಗಳನ್ನು ಅನುಲಕ್ಷಿಸಿ ಅವರ ಯೋಗ್ಯಾಯೋಗ್ಯತೆಯನ್ನು ಹೇಗೆ ಕಟ್ಟುವದು. ನಿನ್ನ ಗೆಳೆಯ ಶಿವಕುಮಾರನು ತಾನು ಮಾಡಿದ ಉಪಕಾರದ ಸೇಡನ್ನು ಪ್ರತಿಫಲರೂಪದಿಂದ ನಿನ್ನ ಕೂಡ ರತಿಕೇಳಿಯ ಆಟದಿಂದ ಆಶಿಸಬಾರದಿದ್ದಿತು. ಹೋಗಲಿ ಪಾಪಿ ಆಶಿಸಿದನೆನ್ನು. ಆದೊಂದು ಸಂಗತಿಯಿಂದ ನೀನು ಮಹಾಪಾಪಿ ಹೇಗಾದೆ? ನಿತ್ಯ ವೇಶ್ಯಾವಾಟಿಕೆಯಲ್ಲಿ ಸುತ್ತುವರಿವ ನಾನು ಮಾತ್ರ ನಿರ್ದೋಷಿ ಹೇಗೆ? ಪುರುಷನ ದೃಷ್ಟಿಯಲ್ಲಿಯೂ ಸ್ತ್ರೀಯ ದೃಷ್ಟಿಯಲ್ಲಿಯೂ ಇಂಥ ಅಂತರವೇಕೆ? ನೀನು ಮಾಡಿದ ಅದೊಂದು—ವಿಶ್ವಾಸಘಾತಕತನ—ದೋಷಕ್ಕಿಗೆ ಇಡೀ ಜೀವನವನ್ನು ತಾಳ್ಮೆ, ವಿವೇಕ, ಶಾಂತತೆಯಲ್ಲಿ ನೂಕಿ ಪಶ್ಚಾತ್ತಪದ ಅಗ್ನಿಮಾರ್ಗದಲ್ಲಿ ನಡೆಸಿತಂದೆ. ನಾನು ಮಾತ್ರ ಅದನ್ನು ತಾಳಲು ಸಾಧ್ಯವಾಗದೆ ಅವರ ವಿಷದ ಕಿಡಿಗಳನ್ನು ನಿನಗೂ ಅಂಟಿಸಿ ಬಲಿಯಿತ್ತೆ. ಲಕ್ಷಣಾ, ಇದೊಂದು ತಪ್ಪೆಂದು ತಿಳಿದು ನನ್ನನ್ನು ಸೆಳವಿಗೆ ಹಾಗೆಯೆ ಬಿಟ್ಟೆಯಾ? ನಿನ್ನ ಬುದ್ಧಿಯನ್ನು ಅಡ್ಡಗಟ್ಟಿ ನಿಲ್ಲಿಸಬಾರದಿದ್ದಿತೇ! ನಿನ್ನ ಅನುಭವದ ಗೋಡೆಯನ್ನು ಕಟ್ಟಿ ನನ್ನನ್ನು ಸೆರೆಹಿಡಿಯಬಾರದಿತ್ತೆ. ನಿನ್ನ ಅತಿ ತಾಳ್ಮೆಯು ಇಬ್ಬರನ್ನೂ ಮೋಸಗೊಳಿಸಿತು. ಲಕ್ಷಣಾ, ನನ್ನನ್ನು ಬೈದು ಬೆದರಿಸಿ ನಿಲ್ಲಿಸಿಕೊಳ್ಳಲಿಲ್ಲೇಕೆ?

—ನನ್ನ ದೊರೆ, ಆಗ ನನ್ನಲ್ಲಿ ಧೈರ್ಯವಿರಲಿಲ್ಲ. ನಾನು ಪಾಪಿ.

—ಅಲ್ಲ ನೀನು ಪರಮಪಾವನಳು. ಪಾವನಳು.

—ಹಾಗೆ ಅನ್ನಬೇಡಿರಿ ,ಪಾಪಿ.

ಅನಂಗರಂಗನು ಎದ್ದು ನಿಂತು ಕರವಸ್ತ್ರವನ್ನು ಹೊರತಗೆದು ಲಕ್ಷಣಾ, ನೀನು ನಿರ್ದೋಷಿ, ನಿರ್ದ್ರೋಷಿ ಪಾವನಳು, ಪಾವನಳು. ನನ್ನ ಸಾಕ್ಷ್ಯವಾಗಿ ನೀನು ಪಾವನಳು. ಎಂದು ಆಕೆಯ ಮುಖವನ್ನು ಒರಸಿ ಕೆನ್ನೆಯ ಮೇಲೆ ಕೈಯಾಡುತ್ತ ಬಿಳುಪೇರಿದ ತುಟಿಗೆ ಮುತ್ತು ಕೊಟ್ಟನು. ಲಕ್ಷಣಾಳಿಗೆ ಅಂಗಾಂಗದ ನಾಡಿಗಳಲ್ಲಿ ಬಿಸಿರಕ್ತ ಉಕ್ಕಿಬಂದಂತೆನಿಸಿತು. ಮೈಯಲ್ಲಿ ಆವೇಶಸಂಚಾರವಾದಂತಾಗಿ ಅನಂಗರಂಗನ ಎರಡೂ ಕೈಗಳನ್ನು ಗಟ್ಟಿಯಾಗಿ ಹಿಡಿದಳು. ನಾಲ್ಕಾರು ನಿಮಿಷ ಮುಖದಲ್ಲಿ ಮುಖವಿಟ್ಟು ನಿರುಕಿಸಿ ಕೊನೆಗೆ ಕೈಬಿಟ್ಟು ಸುಮ್ಮನೆ ಮಲಗಿದಳು.

ಅನಂಗರಂಗನು ಗಾಬರಿಯಾಗಿ—ಲಕ್ಷಣಾ ಎಂದು ಕೂಗಿದನು.

ಕಣ್ಣು ತೆಗೆದು ಗಂಡನ ಕೈಗಳನ್ನು ಹಿಡಿದು ನನ್ನ ದೊರೆಯೇ ನನ್ನ ಮಾಂಗಲ್ಯವೇ, ನನ್ನ ಸರ್ವಸ್ವವೇ ನಿಮ್ಮ ವಿಶಾಲ ಹೃದಯವನ್ನು ನಾನು ಅರಿಯದೆ ಹೋದೆನು. ನಾನೇ ನೊಂದೆ ತಳಮಳಿಸಿದೆ, ಬೆದರಿದೆ. ಅವಕ್ಕೆಲ್ಲ ತಾಳ್ಮೆಯ ಕರಿಮುಸಕನ್ನು ಹಾಕಿದೆ. ಹೃದಯದ ನೂರು ಆಶೆಗಳನ್ನು ಕಬ್ಬಿಣ ಪೆಟ್ಟಿಗೆಯಲ್ಲಿ ತುಳಿದು ತುಂಬಿದೆ. ನನ್ನ ದಿಗ್ಬಂಧನವೇ ನಿಮ್ಮನ್ನು ರಮಿಸದೆ, ತೃಪ್ತಿಪಡಿಸದೆ, ನಿಮ್ಮ ಪುರುಷ ಪತಂಗವೃತ್ತಿಗೆ ಸವಿಯುಣಿಸದೆ ಹೋದೆ. ನಿಮ್ಮನ್ನು ಹರಿಬಿಟ್ಟೆ. ಅದರಫಲ ಹೀಗೆ ಉಣ್ಣಹಚ್ಚಿದೆ. ನನ್ನ ದೊರೆ, ನನ್ನ ಸಾವಿಗೆ ನಾನೇ ಕಾರಣಳು. ಇನ್ನಾದರು ಒಪ್ಪುವಿರಾ? ಲಕ್ಷಣಾ ಇದೇನು ಮಾಡಿದೆ? ಆಯಿತು ಹೋಗಲಿ.

ಲಕ್ಷಣಾ ನನಗೆ ಸಂಕಟವಾಗುವದು. ನೀನು ಪಾವನಳು ! ಎಂದು ಆಕೆಯ ಎದೆಯ ಮೇಲೆ ಮೆಲ್ಲಗೆ ಒರಗಿದನು. ಕಣ್ಣೀರು ಆಕೆಯ ಎದೆಯನ್ನು ತೊಯಿಸಿಬಿಟ್ಟಿತು.

ಹರ್ಷೋನ್ಮಾದದಿಂದ ಲಕ್ಷಣಾಳು ತಬ್ಬಿಬ್ಬಾದಳು. ಗಂಡನ ಮುಖವನ್ನು ಎತ್ತಿ ಕಣ್ಣು ತುಂಬ ನೋಡಿ ಕಂಬನಿಗರೆದಳು. ಎರಡು ನಿಮಿಷ ಕಳೆದಿರಬೇಕು. ಲಕ್ಷಣಾನ ಎದೆಯು ಬಿಕ್ಕಳಿಯಿಂದ ಹಾರಹತ್ತಿತು. ರಂಗನು ಎದ್ದು—ಏನಾಯಿತು ? ಎಂದು ಗಾಬರಿಸುತ್ತ ನುಡಿದನು. ಮೈಮೇಲೆ ಕೈಯಾಡಿಸಹತ್ತಿದನು. ಮತ್ತೆ ಮೂರು ನಾಲ್ಕು ಬಿಕ್ಕಳಿಗೆಬಂದು ಕುತ್ತಿಗೆಯನ್ನು ಚೆಲ್ಲಿ ಕೊನೆಯ ಉಸಿರನ್ನು ಎಳೆದಳು. ಲಕ್ಷಣಾ ಹೋದೆಯಾ ಎಂದು ಅನಂಗನು ಚೀರಿ ಅಳಹತ್ತಿದನು. ಡಾಕ್ಟರರು ಅಷ್ಟರಲ್ಲಿ ಬಂದು ಇದೆಲ್ಲವನ್ನು ನೋಡಿದರು. ಈಗ ಮಾತ್ರ ಅನಂಗನಿಗೆ—ನೀನೇಕೊಂದೆ ! ಎಂದು ನುಡಿಯಲಿಲ್ಲ.




ಜ್ಯೋತಿಷಿ:- ಕೃಷ್ಣ ಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ನವಂಬರ ೧೧ ರಿಂದ ೧೭ ರ ವರೆಗೆ

## ಮೇಷ

ಸ್ವತಃಕ್ಕೆ ಸ್ವಲ್ಪ ಕ್ಲೇಶ. ಆದರೆ ಹೆಂಡತಿಯು ಆರೋಗ್ಯ ಬಹಳ ಅನುಕೂಲ. ಪ್ರಾಪಂಚಿಕ ಸಮಾಧಾನ ಚೆನ್ನಾಗಿ ಉಳಿಯುವಂಥ ಕೆಲ ಸಂಗತಿಗಳು, ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಅತ್ತೆ ಮನೆಯು ಜನರಲ್ಲಿ ಸ್ವಲ್ಪ ಉತ್ಕರ್ಷದ ಸಂಗತಿಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಸ್ವಪ್ನಗಳು ಶುಭ ಮತ್ತು ಭಾವೀ ಸೂಚಕ. ಪತ್ರವ್ಯವಹಾರ ತೊಂದರೆಯದು, ಆದರೆ ಭೆಟ್ಟಿ ಮತ್ತು ಪ್ರವಾಸ ಅನುಕೂಲ. ಅಶ್ವಿನಿಯು ಕೊನೆಯು ೨ ಮತ್ತು ಭರಣಿಯು ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯುಶಸ್ಸು. ತಾ. ೧೧, ೧೬, ೧೭ ಅನುಕೂಲ.

## ವೃಷಭ

ಪ್ರಕೃತಿ ಮತ್ತು ಸ್ತ್ರೀ ಸುಖ ಅನುಕೂಲ. ಮಕ್ಕಳಲ್ಲಿ ಉನ್ನತಿ. ಬಂಧು ವರ್ಗದವರಿಂದ ಬಹಳ ಸುಖ. ಆದರೆ ನೆರೆಯುವರೊಡನೆಬಾಯಿಗೆಬಾಯಿಹತ್ತುವದು. ಉದ್ಯೋಗದಲ್ಲಿಪ್ರಗತಿಪ್ರತಿಷ್ಠೆ ಮತ್ತು ಲಾಭವೂಅನುಕೂಲ. ಆದರೆ ವೆಚ್ಚವೂ ಅಂದಾಜಿಗಿಂತ ಹೆಚ್ಚು. ಮಿತ್ರತ್ವದಲ್ಲಿ ವಿರೋಧ. ಅನೈತಿಕ ಇಲ್ಲವೆ ಖೊಟ್ಟಿ ಕೃತ್ಯ ಮಾಡಿದ ಲೋಕಾಪವಾದ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ, ಕೃತ್ತಿಕೆಯು ಕೊನೆಯು ೨ ಮತ್ತು ರೋಹಿಣಿಯು ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೧೨, ೧೩, ೧೪, ೧೫ ಅನುಕೂಲ.

## ಮಿಥುನ

ಪ್ರಕೃತಿಗೆ ಬಹಳ ಕ್ಲೇಶ. ಸ್ತ್ರೀ ಸುಖದಲ್ಲಿ ವಿರಸ. ಬಹುತರ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ವಿಪರೀತ. ಉದ್ಯೋಗದಲ್ಲಿ ಪ್ರಗತಿ. ಲಾಭ ಮತ್ತು ಪ್ರತಿಷ್ಠೆ ಕಡಮೆಯಾಗಿ ವೆಚ್ಚ ಭಾರವಾದದ್ದಾಗುವಷ್ಟು ಹೆಚ್ಚುವದು. ಮಿತ್ರರಿಂದ ಬಹಳ ಮೋಸ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳ ಹಾನಿ ಹೆಚ್ಚಾದರೂ ನಿಮ್ಮದೂ ಅಲ್ಪ ಸ್ವಲ್ಪ ಹಾನಿಯಾಗುವದು, ಪ್ರತಿಯೊಂದು ಸಂಗತಿ ಮನಸ್ಸಿನ ವಿರುದ್ಧ. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಆರಿದ್ರೆಯು ಕೊನೆಯು ೨ ಪುನರ್ವಸುವಿನ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೩, ೧೪ ಅನುಕೂಲ.

## ಕರ್ಕ

ಪ್ರಕೃತಿ ಮತ್ತು ಸ್ತ್ರೀ ಸುಖವೂ ಅನುಕೂಲ. ಮಕ್ಕಳಲ್ಲಿ ಒಬ್ಬರ ಉತ್ಕರ್ಷವಾದರೆ ಎರಡನೆಯವರ ಅಪಕರ್ಷ. ಆದರೂ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಬಹಳ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಮನಸಿನಂತೆ. ಮಿತ್ರ ಸುಖ ಅನುಕೂಲ, ಆದರೆ ಅವರ ಪರಿವಾರಗಳಲ್ಲಿ ಕ್ಲೇಶ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯಪಕ್ಷಗಳಲ್ಲಿ ಸಮಾನ ಸ್ಥಿತಿ. ಪತ್ರವ್ಯವಹಾರಕ್ಕಿಂತ ಪ್ರವಾಸ ಮತ್ತು ಭೆಟ್ಟಿ ಅನುಕೂಲ. ಪುಷ್ಯದ ಕೊನೆಯ ೨ ಮತ್ತು ಆಶ್ಲೇಷಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದ ಯುಶಸ್ಸು. ತಾ. ೧೧, ೧೫, ೧೬, ೧೭ ಅನುಕೂಲ.

## ಸಿಂಹ

ಹೆಂಡತಿಯು ಪ್ರಕೃತಿಯಲ್ಲಿ ಸ್ವಲ್ಪ ಕುರುಕುರಿ. ಆದರೆ ಉಳಿದವರದು ಅನುಕೂಲವುಳಿಯುವದು. ಪ್ರಾಪಂಚಿಕ ಸುಖ ವ್ಯವಸ್ಥಿತವುಳಿಯುವದು. ಸಮೀಪದ ಆಪ್ತರಲ್ಲಿ ಕೆಲ ಶುಭ ಸಂಗತಿಗಳು. ಸ್ಥಾವರದಲ್ಲಿ ವೆಚ್ಚ ಹೆಚ್ಚು. ಆದರೆ ಅದರಲ್ಲಿಯು ಹೇತು ಸಾಧ್ಯ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಡಂಬಡಿಕೆಯು ಸಂಭವ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ಪ್ರತಿಯೊಂದು ಕೆಲಸ ಆಗುವವರೆಗೆ ವಿಪರೀತ ತೊಂದರೆ. ಮಿತ್ರತ್ವದಲ್ಲಿ ಸ್ವಲ್ಪ ವಿರೋಧ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಪುಬ್ಬಾದ ಕೊನೆಯು ೨ ಮತ್ತು ಪೂರ್ವಾದ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು ತಾ ೧೧—೧೨....೧೩—೧೭ ಅನುಕೂಲ.

## ಕನ್ಯಾ

ಪ್ರಕೃತಿ ಉತ್ತಮ, ಹೆಂಡತಿಗೂಡ ಸ್ವಲ್ಪ ಕಲಹ, ಬಂಧು ವರ್ಗದವರಲ್ಲಿ ವಿಶೇಷ ಉನ್ನತಿ. ಪ್ರಾಪಂಚಿಕ ಸುಖ ಬಹಳ ಅನುಕೂಲ. ಮಿತ್ರರಲ್ಲಿ ಕ್ಲೇಶ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ, ಉತ್ತರಾದ ಕೊನೆಯು ೨ ಮತ್ತು ಹಸ್ತಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸ ತಾ. ೧೨, ೧೩, ೧೫, ೧೫ ಅನುಕೂಲ.

## ತುಲಾ

ಪ್ರಕೃತಿ ಉತ್ತಮ. ಹೆಂಡತಿ ಮತ್ತು ಮಕ್ಕಳಲ್ಲಿ ಪೂರ್ಣ ಸಹಮತ. ಆದರೆ ಮನೆಗೆ ಬಂದ ಅತಿಥಿ ಇಲ್ಲವೆ ಅಭ್ಯಾಗತರು ಕೆಟ್ಟ ಕೆಲಸ ಮಾಡುವದರಿಂದ ಎಲ್ಲರಿಗೂ ಬಹಳ ಉದ್ವೇಗ. ಉದ್ಯೋಗದಲ್ಲಿ ಪ್ರಗತಿ ಸಾಧಾರಣವೆ. ಆದರೆ ಪ್ರತಿಷ್ಠೆ ಮತ್ತುಲಾಭವೂ ಉತ್ತಮ. ಅವಚಿತ ಲಾಭದ ಸಂಭವವೂ ಇದೆ. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರ ಹೆಚ್ಚು ಅನುಕೂಲ. ಆದರೆ ಸ್ವಾತಿಯು ಕೊನೆಯು ೨ ಮತ್ತು ವಿಶಾಖೆಯು ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯುಶಸ್ಸು. ತಾ. ೧೨, ೧೩, ೧೪, ೧೬, ೧೭ ಅನುಕೂಲ.

## ವೃಶ್ಚಿಕ

ನಿಮ್ಮ ಮತ್ತು ಹೆಂಡತಿಯು ಪ್ರಕೃತಿ ಉತ್ತಮ. ಆದರೆ ಮಕ್ಕಳ ಆರೋಗ್ಯ ಚೆನ್ನಾಗಿ ಉಳಿಯುವದಿಲ್ಲ ರತಿ ಸುಖವನ್ನು ಬಿಟ್ಟು ಉಳಿದೆಲ್ಲ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ವಿಪರೀತ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ. ಆದರೆ ಪ್ರತಿಷ್ಠೆ ಬಹಳ ಕುಂದುತ್ತ ಹೋಗುವದು. ನಿಮ್ಮ ಮಾತಿನ ಮೇಲೆ ನಿಮ್ಮ ವಿಶ್ವಾಸವೆ ಇಲ್ಲದಂತಾಗುವದು. ಆದರೆ ಉಳಿದವರ ಮಾತಂತೂ ಹೇಳುವದೇ ಬೇಡ, ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯುಶಸ್ಸು. ಆದರೆ ಶತ್ರುಗಳ ಜೋರು ಹೆಚ್ಚುವದು. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಅನುಕೂಲ ಅನುರಾಧೆಯು ಕೊನೆಯು ೨ ಮತ್ತು ಜ್ಯೇಷ್ಠಾದ ಮೊದಲನೆ ೨ ಚರಣಗಳಿಗೆ ಹೆಚ್ಚು ತೊಂದರೆ. ತಾ. ೧೪, ೧೫, ೧೭ ಅನುಕೂಲ.

## ಧನು

ನಿಮ್ಮ ಪ್ರಕೃತಿ ಅನುಕೂಲ. ಆದರೆ ಹೆಂಡತಿಯದು ಮತ್ತು ಮಕ್ಕಳದು ಅನುಕೂಲ ಉಳಿಯದೆ ಎಲ್ಲರಿಂದಲೂ ನಿಮ್ಮದೆ ಅಪಹಾಸ. ಉದ್ಯೋಗದಲ್ಲಿ ಪ್ರಗತಿ ಅನುಕೂಲ. ಆದರೆ ಪ್ರತಿಷ್ಠೆ ಮತ್ತು ಲಾಭ ಬಹಳ ಕಡಿಮೆ. ನಿಯೋಜಿತ ಮತ್ತು ಅನಪೇಕ್ಷಿತ ಖರ್ಚು ದೊಡ್ಡ ಪ್ರಮಾಣದಲ್ಲಿ ಮಾಡುವ ಪ್ರಸಂಗ. ಪ್ರವಾಸ ಅನುಕೂಲ. ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಬಹಳ ತೊಂದರೆ. ಶತ್ರುಗಳ ಬಲೆಯಲ್ಲಿ ಸಿಕ್ಕುವ ಭೀತಿ ಮೂಲಾದ ಕೊನೆಯ ೨ ಮತ್ತು ಪೂರ್ವಾಷಾಢಾದ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೨—೧೬—೧೭ ಅನುಕೂಲ.

## ಮಕರ

ನಿಮ್ಮ ಮತ್ತು ಹೆಂಡತಿಯು ಆರೋಗ್ಯ ಅನುಕೂಲ. ಆದರೆ ಮಕ್ಕಳ ಆರೋಗ್ಯ ಚೆನ್ನಾಗುಳಿಯುವದಿಲ್ಲ. ಪ್ರಾಪಂಚಿಕ ಸುಖವೂ ಬಹಳ ಉದ್ವೇಗಕಾರಕ. ಉದ್ಯೋಗದಲ್ಲಿ ಮಾತ್ರ ಬಹಳ ಜೋರಿನ ಪ್ರಗತಿ ತುಂಬ ಲಾಭ ಮತ್ತು ಅನಾಯಾಸವಾಗಿ ಲಬ್ಧ ಪ್ರತಿಷ್ಠೆ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ ಮಿತ್ರ ಸುಖ ಉತ್ತಮ. ಸ್ಥಾವರದಲ್ಲಿ ಅನುಕೂಲ. ಘಟನೆಗಳು. ಉತ್ತರಾಷಾಢಾದ ಕೊನೆಯು ೨ ಮತ್ತು ಶ್ರವಣಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ ೧೧—೧೪—೧೫ ಅನುಕೂಲ.

## ಕುಂಭ

ಪ್ರಕೃತಿ ಬಹಳ ಮಟ್ಟಿಗೆ ಆಯಾಸಗೊಳ್ಳುವದು. ಸ್ತ್ರೀ ಸುಖ ಅನುಕೂಲ. ಆದರೆ ಮಕ್ಕಳು ಅಪ್ರಿಯ ಕೃತ್ಯ ಮಾಡುವರು. ಆಪ್ತರಿಂದ ಬಹಳ ಉಪದ್ರವ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಅಸಾಮಾನ್ಯ ವ್ಯಕ್ತಿಯು ಭೆಟ್ಟಿ ಸಂದರ್ಶನಗಳ ಯುಯೋಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ ವಿಜಯ. ಮಿತ್ರ ಸುಖ ಉತ್ತಮ. ಪ್ರವಾಸಾದಿ ಕೆಲಸ ಹಿತಕರ. ಶತತಾರಿಕೆಯ ಕೊನೆಯ ೨ ಮತ್ತು ಪೂರ್ವಾಭಾದ್ರಪದದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೨—೧೩—೧೬·೧೭ ಅನುಕೂಲ.

## ಮೀನ

ಪ್ರಕೃತಿ ಸಾಧಾರಣವೆ. ಆದರೆ ಹೆಂಡತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಮಿತ್ರರು ಬಂಧು ವರ್ಗದವರು ಮತ್ತು ಮಕ್ಕಳು ಇವರಲ್ಲಿ ಅನೇಕರ ಉತ್ಕರ್ಷವಾಗುವಂಥ ಘಟನೆಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯುಶಸ್ಸು. ಆದರೆ ಶತ್ರುಗಳ ತೊಂದರೆ ಹೆಚ್ಚು. ಮಿತ್ರ ಸುಖ ಉತ್ತಮ. ಪುಣ್ಯ ಸ್ಥಳಗಳ ದರ್ಶನವಾಗುವಂತೆ ಪ್ರವಾಸ, ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ, ಉತ್ತರಾಭಾದ್ರಪದದ ಕೊನೆಯ ೨ ಮತ್ತು ರೇವತಿಯು ಮೊದಲನೆ ೨ ಚರಣಗಳಿಗೆ ತೊಂದರೆಯಿಂದ ಯುಶಸ್ಸು. ತಾ ೧೧-೧೪ ೧೫ ಅನುಕೂಲ.

---

## ಪುಸ್ತಕ ಮತ್ತು ವಿಮರ್ಶೆ

( ೩ನೇ ಪುಟದಿಂದ ಬಂದುದು )

ಸಿಂಹಾವಲೋಕನಶಕ್ತಿ ಅಗತ್ಯವಿದೆ ನನಗಿಂದು' ಎಂದು ಬರೆದಿದ್ದಾರೆ. ನರಸಿಂಹನ ಈ ಧ್ಯೇಯ ಉದಾತ್ತವಾಗಿದ್ದು ಅದು ಕೈಗೂಡಲೆಂದು ಹಾರೈಸುತ್ತೇವೆ. ಮುಂಗಪ್ರಕರಣವೂ ಇದರಲ್ಲಿ ಪ್ರಾರಂಭವಾಗಿದೆ. ಕಾಗದದ ನಿಯಂತ್ರಣ ಹೋದ ಬಳಿಕ ನರಸಿಂಹ ಇದಕ್ಕು ಹೆಚ್ಚು ಪುಟಗಳೊಂದಿಗೆ ಹೊರಡುವನು. ಕನ್ನಡಿಗರು ನರಸಿಂಹನನ್ನು ಬರಮಾಡಿಕೊಂಡು ಪ್ರೋತ್ಸಾಹಿಸಬೇಕೆಂದು ಕೇಳಿಕೊಳ್ಳುತ್ತೇವೆ.

**ಅಂತಿಮ ಆಹ್ವಾನ**

೯೬ ಪುಟಗಳು ಬೆಲೆ ನಾಲ್ಕಾಣೆ.

**ಮೈಸೂರಿನ ಮಹಾ ಸಮರ**

ಪುಟಗಳು ೧೬ ಬೆಲೆ ಎರಡಾಣೆ.

**ಹಿಂದು ಮುಸ್ಲಿಂ ಗಲಭೆಗೆ ಯಾರು ಹೊಣೆ?**

ಪುಟಗಳು ೧೬ ಬೆಲೆ ಎರಡಾಣೆ.

ಹುಬ್ಬಳ್ಳಿ ಜನತಾಸಾಹಿತ್ಯದ ಪ್ರಕಟಣೆಗಳಿವು. ಅಂತಿಮ ಆಹ್ವಾನದಲ್ಲಿ ಕಮ್ಯುನಿಸ್ಟ ಪಕ್ಷದ ಕೇಂದ್ರ ಸಮಿತಿ ಎರಡು ತಿಂಗಳು ಹಿಂದೆ ಸೇರಿ ಮಾಡಿದ ಅಂತಿಮ ಆಹ್ವಾನದ ಗೊತ್ತುವಳಿಯನ್ನು ವಿವರಿಸಿದ್ದಾಗಿದೆ. ಮೈಸೂರಿನ ಮಹಾ ಸಮರದಲ್ಲಿ ಮೈಸೂರು ಸಂಸ್ಥಾನ ಪ್ರಜರು ನಡೆಸಿದ ಸ್ವಾತಂತ್ರ್ಯ ಸಂಗ್ರಾಮದ ವಿವರಣೆಯಿದೆ. ಮೂರನೆಯ ಪುಸ್ತಕದಲ್ಲಿ ಪ್ರಸ್ತುತ ಹಿಂದು ಮುಸ್ಲಿಂ ಗಲಭೆಗೆ ಯಾರು ಹೊಣೆ ಎಂಬದನ್ನು ಹೇಳುತ್ತ ಬ್ರಿಟಿಶರ 'ವಿಭಜಿಸಿ ಆಳುವ' ರೀತಿ ಮತ್ತು ಎರಡು ಪಕ್ಷಗಳ ರಾಜಕೀಯ ವಿಭಿನ್ನ ಧೋರಣ ಕಾರಣವೆಂದು ಹೇಳಿದ್ದಾರೆ. ಕಮ್ಯುನಿಷ್ಟ ಪಕ್ಷದ ಈ ಮೂರು ಪ್ರಕಟನೆಗಳಲ್ಲಿ ಆ ಪಕ್ಷದ ಪ್ರಚಾರ ತುಂಬಿದೆಂದು ಬೇರೆ ಹೇಳಬೇಕಿಲ್ಲ.

**Matriculation General Sanskrit:-**

By N. L. Bapat, B. A. B. T. Head master K. E. Board's High School Malmaddi, Dharwar. ಕ್ರೌನ ಅಷ್ಟಪತ್ರ ೧೨೦ ಪುಟಗಳು ಬೆಲೆ ೧ ರೂ. ಪ್ರಕಾಶಕರು ಶ್ರೀ ಆರ್ ಜಿ ಹುಕ್ಕೇರಿ ಸ್ಟ್ಯುಡಂಟ್ಸ ಓನ ಬುಕ್ ಡಿಪೊ ಧಾರವಾಡ ಪ್ರೊ. ವಿ. ಎಂ ಆಪಟೆಯವರ ಮುನ್ನುಡಿಯುಳ್ಳ ಈ ಪುಸ್ತಕವು ವಿದ್ಯಾರ್ಥಿಗಳಿಗೆ ಸಂಸ್ಕೃತಾಭ್ಯಾಸ ಮಾಡಲು ಒಳ್ಳೆ ಉಪಯುಕ್ತವಾಗಿದೆ.

ಈಹೊತ್ತಿಗೆಯ ವಿಷಯವು 'ರಸನಾಗ್ರ ನರ್ತಕಿ' ಯಾಗಲೆಂಬ ಧ್ಯೇಯದಿಂದ ಸಪ್ಪೆಯಾದ ಯಾವ ವಿಭಾಗವನ್ನೂ ಲೇಖಕರು ಸೇರಿಸಿಲ್ಲ. ರಾಮಾಯಣ, ಮಹಾಭಾರತ, ದಶಕುಮಾರ ಚರಿತೆ, ಕಾದಂಬರಿ ಮೊದಲಾದ ಉದ್ಗ್ರಂಥಗಳಿಂದ ಗದ್ಯ ಪದ್ಯ ವಿಭಾಗಗಳನ್ನಾಯ್ದುಕೊಂಡು ನೀತಿ ಹಾಗೂ ಮನರಂಜನೆಗಳೆರಡಕ್ಕೂ ಎಡೆ ಕಲ್ಪಿಸಿ ಕೊಟ್ಟಿದ್ದಾರೆ. ಉಪಯುಕ್ತತೆಯ ದೃಷ್ಟಿಯಿಂದ ಅವತರಣಿಕೆಗಳ ಕೊನೆಗೇ ಅನುವಾದಗಳ ಕಠಿಣ ಶಬ್ದಗಳ ಕೋಶ, ಪಡೆನುಡಿಗಳಿವೆ. ಸಾಮಾನ್ಯತಃ ಆಂಗ್ಲ ಭಾಷೆಯಿಂದ ಮಾತೃಭಾಷೆಗೆ ಪರಿವರ್ತಿಸಬೇಕಾದಾಗ ಗಮನಿಸಬೇಕಾದ ಮಹತ್ವದ ಸೂಚನೆಗಳನ್ನು ಕೊಟ್ಟಿದ್ದರಿಂದ ವಿದ್ಯಾರ್ಥಿಗಳಿಗೆ ವಿಶೇಷ ಅನುಕೂಲತೆಯುಂಟಾಗಿದೆ. ಅವತರಣಿಕೆಗಳ ಆಯ್ಕೆಯಲ್ಲಿ ಲೇಖಕರು ಮಾಧ್ಯಮಿಕ ಶಾಲೆಗಳ ೬—೭ ವರ್ಷಗಳ ಅಭ್ಯಾಸ ಪತ್ರಿಕೆಯನ್ನೇ ಕಣ್ಣು ಮುಂದೆ ಇಟ್ಟುಕೊಂಡಿರುವದರಿಂದ ಹಾಗೂ ಕೆಲವು ಗದ್ಯ ವಿಭಾಗಗಳನ್ನು ತಾವೇ ಮಾದರಿಗೆಂದು ಒಳ್ಳೇ ರೀತಿಯಿಂದ ಪರಿವರ್ತಿಸಿ ತೋರಿಸಿದ್ದರಿಂದ ವಿದ್ಯಾರ್ಥಿಗಳಿಗೆ ಇದೀ ಪುಸ್ತಕವು ಅತ್ಯುಪಯುಕ್ತವೆನಿಸುವಲ್ಲಿ ಯಾವ ಸಂಶಯವಿಲ್ಲ. ಶುದ್ಧ ಹಾಗೂ ಅಂದವಾದ ಸಂಸ್ಕೃತ ಭಾಷಾ ಸರಣಿಯ ಆದರ್ಶ ಹಾಕಿ ಕೊಟ್ಟಿದ್ದಾರೆ. ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಈ ಪುಸ್ತಕವನ್ನು ಪ್ರಕಟಿಸಿದ್ದಕ್ಕಾಗಿ ಪ್ರಕಾಶಕರು ಅಭಿನಂದನಾರ್ಹರಾಗಿರುವರು.

---



---

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತ.